# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೧೫ ( ಫಾಲ್ಗುಣ ೭, ಶಕ ವರ್ಷ ೧೯೩೬)<br>Bengaluru, Thursday, February 26, 2015 (Phalguna 7, Shaka Varsha 1936) | ಸಂಚಿಕೆ ೯<br>Issue 9 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ರಾಷ್ಟ್ರೀಯ/ಅಂತರರಾಷ್ಟ್ರೀಯ ಸಂಗೀತೋತ್ಸವ ಹಾಗೂ ಇನ್ನಿತರ ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ಆಯೋಜಿಸುವಾಗ ಅನುಸರಿಸಬೇಕಾದ ಮಾರ್ಗಸೂಚಿಗಳು ಹಾಗೂ ಜಿಲ್ಲಾಮಟ್ಟದ ಅಧಿಕಾರಿಗಳ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಮೈಸೂರು, ಇವರ ಪತ್ರ ಸಂಖ್ಯೆ : ಎಡಿಎಂ : ವಿಚಾರಣೆ : ಸಿಆರ್–11/2011–12, ದಿನಾಂಕ : 05–05–2012.
2. ಪತ್ರ ಸಂಖ್ಯೆ : ಪ್ರಇ 68 ಪ್ರವಾಇ 12, ದಿನಾಂಕ : 20–10–2012.
3. ಪ್ರವಾಸೋದ್ಯಮ ನಿರ್ದೇಶಕರ ಪತ್ರ ಸಂಖ್ಯೆ : ಪ್ರಇ/ಉ/68/2011–12/4012, ದಿನಾಂಕ : 16/17–01–2014.
4. ಪ್ರಾದೇಶಿಕ ಆಯುಕ್ತರು, ಮೈಸೂರು ಇವರ ಪತ್ರ ಸಂಖ್ಯೆ : ಎಡಿಎಂ : ವಿಚಾರಣೆ : ಸಿಆರ್ : 11 : 2011–12, ದಿನಾಂಕ : 21–02–2014.
5. ದಿನಾಂಕ : 24–02–2014ರಂದು ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಉಡುಪಿ ಜಿಲ್ಲೆಯ ಸೆಂಟ್ ಮೇರಿಸ್ ದ್ವೀಪದಲ್ಲಿ ದಿನಾಂಕ : 3–2–2012 ರಿಂದ 5–2–2012 ರವರೆಗೆ ನಡೆದ ಅಂತರರಾಷ್ಟ್ರೀಯ ಸಂಗೀತೋತ್ಸವದಲ್ಲಿ ಭಾರತೀಯ ಸಂಸ್ಕೃತಿಗೆ ಧಕ್ಕೆ ಬರುವಂತಹ ರೀತಿಯಲ್ಲಿ ನಡೆದ ಘಟನೆಯ ಬಗ್ಗೆ ಪ್ರಾದೇಶಿಕ ಆಯುಕ್ತರು, ಮೈಸೂರು, ಇವರಿಗೆ ತನಿಖೆ ಮಾಡಿ ವರದಿ ನೀಡುವಂತೆ ಸೂಚಿಸಲಾಗಿತ್ತು. ಅದರನ್ವಯ ಪ್ರಾದೇಶಿಕ ಆಯುಕ್ತರು ಸ್ಥಳ ತನಿಖೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಮುಂದುವರೆದು, ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಸರ್ಕಾರ ನೀಡಿದ ನಿರ್ದೇಶನದನ್ವಯ ವಿಚಾರಣಾ ವರದಿಯಲ್ಲಿ ನಮೂದಿಸಿದ್ದ ಸಂಬಂಧಪಟ್ಟ ಅಧಿಕಾರಿಗಳಿಗೆ ಈ ರೀತಿಯ ಘಟನೆಗಳು ಮರುಕಳಿಸದ ರೀತಿಯಲ್ಲಿ ಜಾಗರೂಕರಾಗಿರುವಂತೆ ಸೂಚನೆ ನೀಡಿರುತ್ತಾರೆ.

ಮುಂದುವರೆದು, ಮೇಲೆ ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಓದಲಾದ ಪತ್ರಗಳಲ್ಲಿ ಪ್ರವಾಸೋದ್ಯಮ ನಿರ್ದೇಶಕರು ಮತ್ತು ಪ್ರಾದೇಶಿಕ ಆಯುಕ್ತರು, ಮೈಸೂರುರವರು ರಾಜ್ಯಾದ್ಯಂತ ಇಂತಹ ಸಮಾರಂಭಗಳು ಆಯೋಜಿಸುವಾಗ ಸಂಬಂಧಪಟ್ಟವರೆಲ್ಲರೂ ಅನುಸರಿಸಬೇಕಾದ ಹಾಗೂ ಅನ್ವಯವಾಗುವ ಸ್ಪಷ್ಟ ಮಾರ್ಗದರ್ಶನಗಳನ್ನು ರೂಪಿಸಲು ಕರಡು ಮಾರ್ಗಸೂಚಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ ಹಾಗೂ ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ಆಯೋಜಿಸುವಾಗ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಅಧಿಕಾರಿಗಳ ಸಮಿತಿ ರಚಿಸುವುದು ಸೂಕ್ತವಾಗಿರುತ್ತದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮುಂದುವರೆದು, ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದಂತೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ : 24–2–2014ರಂದು ಈ ವಿಷಯದ ಕುರಿತಂತೆ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ಪ್ರಾದೇಶಿಕ ಆಯುಕ್ತರು ಮತ್ತು ಪ್ರವಾಸೋದ್ಯಮ ನಿರ್ದೇಶಕರು ಸಲ್ಲಿಸಿದ್ದ ಮಾರ್ಗಸೂಚಿಗಳ ಕುರಿತಂತೆ ಚರ್ಚಿಸಲಾಗಿರುತ್ತದೆ.

ಆದ್ದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ ಭಾರತೀಯ ಸಂಸ್ಕೃತಿಗೆ ಧಕ್ಕೆ ಬರುವಂತಹ ರೀತಿಯಲ್ಲಿ ಇನ್ನು ಮುಂದೆ ಇಂತಹ ಘಟನೆಗಳು ಜರುಗದಂತೆ ಕ್ರಮಕೈಗೊಳ್ಳಲು ಸರ್ಕಾರ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಪ್ರಇ 68 ಪ್ರವಾಇ 2012, ಬೆಂಗಳೂರು, ದಿನಾಂಕ : 25-10-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ರಾಷ್ಟ್ರೀಯ/ಅಂತರರಾಷ್ಟ್ರೀಯ ಸಂಗೀತೋತ್ಸವ ಹಾಗೂ ಇನ್ನಿತರೆ ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ಆಯೋಜಿಸುವಾಗ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವ ಮಾರ್ಗಸೂಚಿಗಳನ್ನು ಪಾಲಿಸಿ ಕಾರ್ಯಕ್ರಮಕ್ಕೆ ಅನುಮತಿ ನೀಡಲು ಬೆಂಗಳೂರು ನಗರ ಜಿಲ್ಲೆ ಹೊರತುಪಡಿಸಿ ರಾಜ್ಯದ ಇತರೆ ಎಲ್ಲಾ ಜಿಲ್ಲೆಗಳಿಗೂ ಅನ್ವಯಿಸುವಂತೆ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಜಿಲ್ಲಾಮಟ್ಟದ ಸಮಿತಿ ರಚಿಸಿ ಸರ್ಕಾರವು ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು | ಸದಸ್ಯರು |
| 3. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |
| 4. | ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 5. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | ಸದಸ್ಯರು |
| 6. | ಜಿಲ್ಲಾ ಅಗ್ನಿಶಾಮಕ ಅಧಿಕಾರಿ | ಸದಸ್ಯರು |
| 7. | ಜಿಲ್ಲಾ ಅಧಿಕಾರಿ, ಅಬಕಾರಿ ಇಲಾಖೆ | ಸದಸ್ಯರು |
| 8. | ಜಿಲ್ಲಾ ವಾರ್ತಾಧಿಕಾರಿ | ಸದಸ್ಯರು |
| 9. | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 10. | ಸಹಾಯಕ/ಉಪ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ | ಸದಸ್ಯ-ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ಆಯೋಜಿಸುವ ಸಂದರ್ಭದಲ್ಲಿ ಸಭೆಯನ್ನು ಕರೆದು, ಜಿಲ್ಲಾಮಟ್ಟದ ಅಧಿಕಾರಿಗಳ ಅಭಿಪ್ರಾಯ ಪಡೆದು, ಸಂಬಂಧಪಟ್ಟ ಎಲ್ಲಾ ದಾಖಲೆಗಳು ಮತ್ತು ಸಮಿತಿ ಸಭೆಯ ಲಿಖಿತ ನಿರ್ಣಯ/ನಡವಳಿಯೊಂದಿಗೆ ಕಾರ್ಯಕ್ರಮ ನಡೆಯುವ ಪ್ರದೇಶಕ್ಕನುಗುಣವಾಗಿ ಷರತ್ತುಗಳನ್ನು ವಿಧಿಸಿ, ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ವಿವರವಾಗಿ ಚರ್ಚಿಸಿ ಸಂಬಂಧಪಟ್ಟ ಅಧಿಕಾರಿಗಳಿಗೆ ಮತ್ತು ಸದರಿ ಖಾಸಗಿ ಸಂಸ್ಥೆ/ವ್ಯಕ್ತಿಗಳಿಗೆ ಅನುಬಂಧದಲ್ಲಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಕಾರ್ಯಕ್ರಮ ಆಯೋಜಿಸಲು ಅನುಮೋದನೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಜಂಟಿ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ಪ್ರಇ 68 ಪ್ರವಾಇ 2012, ಬೆಂಗಳೂರು, ದಿನಾಂಕ : 25-10-2014ಕ್ಕೆ ಅನುಬಂಧ**

**ರಾಷ್ಟ್ರೀಯ/ಅಂತರರಾಷ್ಟ್ರೀಯ ಸಂಗೀತೋತ್ಸವ ಹಾಗೂ ಇನ್ನಿತರೆ ಪ್ರವಾಸೋದ್ಯಮ ಸಂಬಂಧಿತ ಕಾರ್ಯಕ್ರಮಗಳನ್ನು ಆಯೋಜಿಸುವಾಗ ಅನುಸರಿಸಬೇಕಾದ ಮಾರ್ಗಸೂಚಿಗಳು :-**

1. ಯಾವುದೇ ಖಾಸಗಿ ಸಂಸ್ಥೆ ಅಥವಾ ವ್ಯಕ್ತಿಯ ಮಾಲೀಕತ್ವದ ಪ್ರಾಯೋಜಿತ ಕಾರ್ಯಕ್ರಮವನ್ನು ನಡೆಸಲು ಅನುಮತಿ ಕೋರಿ ಸ್ವೀಕೃತವಾಗುವಂತಹ ಅರ್ಜಿಯೊಂದಿಗೆ ಆ ಕಾರ್ಯಕ್ರಮದ ರೂಪುರೇಷೆಗಳು, ಕಾರ್ಯಕ್ರಮದ ಉದ್ದೇಶ, ಈ ಕಾರ್ಯಕ್ರಮದಿಂದ ಸಾರ್ವಜನಿಕ ಪ್ರಯೋಜನ, ಯೋಜನಾ ವರದಿ, ಆರ್ಥಿಕ ವೆಚ್ಚ, ಹಣಕಾಸು ಮೂಲಗಳು, ಪ್ರಾಯೋಜಕರ ಹೆಸರು ಹಾಗೂ ಅವರ ವ್ಯಕ್ತಿಗತ ವಿವರ, ಇಂತಹ ಕಾರ್ಯಕ್ರಮಗಳ ಪ್ರಾಯೋಜಕತ್ವದ ಪೂರ್ವಾನುಭವ ಇವುಗಳೊಂದಿಗೆ ಪೂರ್ಣ ಪ್ರಮಾಣದ ಪ್ರಸ್ತಾವನೆಯನ್ನು ಜಿಲ್ಲೆಯ ಜಿಲ್ಲಾಧಿಕಾರಿಯವರಿಗೆ ಸಲ್ಲಿಸುವುದು.
2. ಪ್ರವಾಸೋದ್ಯಮ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ, ಪ್ರವಾಸೋದ್ಯಮ ಇಲಾಖಾ ಅಧಿಕಾರಿಗಳೊಂದಿಗೆ ಪೂರ್ವಭಾವಿಯಾಗಿ ಚರ್ಚಿಸಿ, ನಂತರ ಕಾರ್ಯಕ್ರಮವನ್ನು ರೂಪಿಸುವುದು.
3. ಜಿಲ್ಲಾಮಟ್ಟದ ಸಮಿತಿಯ ಸಭೆ ನಡೆಸಿ, ಪ್ರವಾಸೋದ್ಯಮ ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ವಿವರವಾಗಿ ಚರ್ಚಿಸಿ ಸಂಬಂಧಪಟ್ಟ ಅಧಿಕಾರಿಗಳಿಗೆ ಮತ್ತು ಸದರಿ ಖಾಸಗಿ ಸಂಸ್ಥೆ/ವ್ಯಕ್ತಿಗಳಿಗೆ ಸೂಚನೆಗಳನ್ನು ನೀಡುವ ಜೊತೆಗೆ ಕಾರ್ಯಕ್ರಮಕ್ಕೆ ಅನುಮತಿ ನೀಡುವುದು.
4. ಪ್ರವಾಸೋದ್ಯಮ ಕಾರ್ಯಕ್ರಮದ ಆಯೋಜಕರಿಂದ ಕಾರ್ಯಕ್ರಮದ ವೆಚ್ಚ ಮತ್ತು ಆದಾಯಕ್ಕನುಗುಣವಾಗಿ ಜಿಲ್ಲಾಮಟ್ಟದ ಸಮಿತಿಯು ಸಮಯೋಚಿತವಾಗಿ ನಿಗದಿಪಡಿಸುವ ಭದ್ರತಾ ಠೇವಣಿಯನ್ನು ಪಡೆದುಕೊಳ್ಳುವುದು.
5. ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ನಡೆಸುವಾಗ ತಡರಾತ್ರಿವರೆಗೂ ನಡೆಸುವುದನ್ನು ನಿಷೇಧಗೊಳಿಸಿ ರಾತ್ರಿ 10.00 ಗಂಟೆಯೊಳಗಾಗಿ ಕಾರ್ಯಕ್ರಮ ಮುಕ್ತಾಯಗೊಳಿಸುವಂತೆ ಪೂರ್ವ ಷರತ್ತಿಗೊಳಪಟ್ಟು ಕಾರ್ಯಕ್ರಮವನ್ನು ನಡೆಸಲು ಅನುಮತಿ ನೀಡುವುದು.
6. ಪ್ರವಾಸೋದ್ಯಮ ಕಾರ್ಯಕ್ರಮಗಳಿಂದ ಸುತ್ತ ಮುತ್ತಲಿರುವ ಜನವಸತಿ ಪ್ರದೇಶಗಳಿಗೆ ಹಾಗೂ ಸಾರ್ವಜನಿಕರಿಗೆ ಯಾವುದೇ ವಿಧವಾದ ತೊಂದರೆಯಾಗದಂತೆ ಹಾಗೂ ಕಾರ್ಯಕ್ರಮದಿಂದ ಶಬ್ಧ ಮಾಲಿನ್ಯವಾಗದಂತೆ ಮುನ್ನೆಚ್ಚರಿಕಾ ಕ್ರಮವಹಿಸುವುದು.
7. ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ನಡೆಸುವ ಸಂದರ್ಭದಲ್ಲಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವ ಪ್ರವಾಸಿಗರುಗಳಿಗೆ ಆಸನದ ವ್ಯವಸ್ಥೆ, ಕುಡಿಯುವ ನೀರು, ಶೌಚಾಲಯ, ಬೆಳಕಿನ ವ್ಯವಸ್ಥೆ, ತುರ್ತು ವೈದ್ಯಕೀಯ ಚಿಕಿತ್ಸೆ ವ್ಯವಸ್ಥೆ ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಷರತ್ತಿಗೊಳಪಟ್ಟು ಅನುಮತಿ ನೀಡುವುದು.

8. ಪ್ರವಾಸೋದ್ಯಮ ಖಾಸಗಿ ಕಾರ್ಯಕ್ರಮಗಳನ್ನು ಸರ್ಕಾರಿ ಆಸ್ತಿಯಲ್ಲಿ ನಡೆಸುವ ಉದ್ದೇಶಿಸಿದ್ದಲ್ಲಿ, ಕಾರ್ಯಕ್ರಮ ಆಯೋಜಕರಿಂದ ನೆಲಬಾಡಿಗೆ/ಕಟ್ಟಡ ಬಾಡಿಗೆ ವಸೂಲು ಮಾಡುವುದು ಕಡ್ಡಾಯಪಡಿಸಬೇಕಾಗಿರುತ್ತೆ ಹಾಗೂ ಕಾರ್ಯಕ್ರಮದ ನಂತರ ಸ್ಥಳವನ್ನು ಸ್ವಚ್ಛಗೊಳಿಸಿ ಯಥಾಸ್ಥಿತಿಯಲ್ಲಿ ಹಿಂದಿರುಗಿಸುವ ಷರತ್ತು ವಿಧಿಸುವುದು.

9. ಎಲ್ಲಾ ಕಾರ್ಯಕ್ರಮಗಳಿಗೆ ಜಿಲ್ಲಾಡಳಿತ ವತಿಯಿಂದ ಜಿಲ್ಲಾ ಮಟ್ಟದ ಒಬ್ಬ ಅಧಿಕಾರಿಯನ್ನು ನೇಮಿಸುವುದು. ಕಾರ್ಯಕ್ರಮದ ಮಧ್ಯದಲ್ಲಿ ಯಾವುದೇ ರೀತಿಯ ಅಹಿತಕರ ಘಟನೆಗಳು ಅಶ್ಲೀಲತೆ, ದೂಮಪಾನ, ಮದ್ಯಪಾನ ಮಾಡುವುದು/ ಕಂಡು ಬಂದಲ್ಲಿ ಕೂಡಲೇ ಪೊಲೀಸರಿಗೆ ಮಾಹಿತಿ ನೀಡಿ ಕಾರ್ಯಕ್ರಮವನ್ನು ಜಿಲ್ಲಾಧಿಕಾರಿಗಳು ನಿಯೋಜಿಸಿರುವ ಪ್ರತಿನಿಧಿಯು ರದ್ದು ಪಡಿಸಲು ಕ್ರಮ ಕೈಗೊಳ್ಳುವುದು.

10. ಪ್ರವಾಸೋದ್ಯಮ ಕಾರ್ಯಕ್ರಮಗಳಿಗೆ ಸೂಕ್ತ ಪೊಲೀಸ್ ಬಂದೋಬಸ್ತ್‌ನ್ನು ಮಾಡಿಕೊಳ್ಳಬೇಕಾದಲ್ಲಿ ನಿಯಮಾನುಸಾರ ಪೊಲೀಸ್ ಇಲಾಖೆಯು ನಿಗದಿಪಡಿಸುವ ಮೊಬಲಗನ್ನು ಸಂಬಂಧಪಟ್ಟ ಪ್ರಾಯೋಜಕರಿಂದ ಕಾರ್ಯಕ್ರಮ ನಡೆಸುವ ಮುಂಚಿತವಾಗಿಯೇ ಪಾವತಿಸಿಕೊಳ್ಳುವುದು.

11. ಪ್ರವಾಸೋದ್ಯಮ ಕಾರ್ಯಕ್ರಮಗಳಿಂದ ಸರ್ಕಾರಿ/ಖಾಸಗಿ ಆಸ್ತಿಗಳಿಗೆ ಧಕ್ಕೆ ಉಂಟು ಮಾಡದಂತೆ ಪ್ರಾಯೋಜಕರಿಗೆ ಷರತ್ತು ಹಾಕುವುದು. ಆಸ್ತಿಗೆ ಧಕ್ಕೆ ಉಂಟಾದ ಷಕ್ಷದಲ್ಲಿ ಕಾರ್ಯಕ್ರಮದ ಪ್ರಾಯೋಜಕರಿಂದಲೇ ನಷ್ಟವನ್ನು ಭರಿಸುವುದು.

12. ಪ್ರವಾಸೋದ್ಯಮ ಕಾರ್ಯಕ್ರಮಗಳಿಂದ ಖಾಸಗಿ ಸಂಸ್ಥೆಯವರಿಗೆ ಅಥವಾ ಮಾಲೀಕರಿಗೆ ಬರುವಂತಹ ಆದಾಯಕ್ಕನುಗುಣವಾಗಿ ನಿಯಮಾನುಸಾರ ರಾಜ್ಯ ಮತ್ತು ಕೇಂದ್ರ ಸರ್ಕಾರದ ನಿಯಮಗಳಂತೆ ನಿಗಧಿಪಡಿಸಿದ ತೆರಿಗೆಯನ್ನು ಕಡ್ಡಾಯವಾಗಿ ಪಾವತಿಸಿಕೊಳ್ಳುವುದು.

13. ಪ್ರವಾಸೋದ್ಯಮ ಕಾರ್ಯಕ್ರಮಗಳಿಗೆ ಅನುಮತಿ ನೀಡುವ ಸಮಯದಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ಮಾಡುವುದು. ಲಿಕ್ಕರ್ ಸೇವನೆ, ನಿಷೇಧಿತ ವಸ್ತುವನ್ನು ಸೇವನೆ ಮಾಡುವುದು ಇವುಗಳೆಲ್ಲವನ್ನು ನಿಷೇಧಗೊಳಿಸಿ ಅನುಮತಿ ನೀಡುವುದು ಸೂಕ್ತವಾಗಿರುತ್ತದೆ ಹಾಗೂ ಈ ಷರತ್ತನ್ನು ಉಲ್ಲಂಘನೆ ಮಾಡಿದ್ದಲ್ಲಿ ಜಿಲ್ಲಾಡಳಿತವು ತಕ್ಷಣವೆ ನಿಯಮಾನುಸಾರ ಕ್ರಮಕೈಗೊಳ್ಳುವುದು.

14. ಪ್ರಾಕೃತಿಕ ಸೌಂದರ್ಯ ಮತ್ತು ಪರಿಸರವನ್ನು ಕಾಪಾಡುವ ಹಿತದೃಷ್ಟಿಯಿಂದ ಪ್ಲಾಸ್ಟಿಕ್, ಬ್ಯಾನರ್ ಬಳಕೆ ಮತ್ತು ಪರಿಸರಕ್ಕೆ ಹಾನಿ ಮಾಡುವಂತಹ ವಸ್ತುಗಳನ್ನು ನಿಷೇಧಿಸುವುದು.

15. ಪ್ರವಾಸೋದ್ಯಮ ಕಾರ್ಯಕ್ರಮ ನಡೆಯುವ ಪೂರ್ವದಲ್ಲಿ ಕಾನೂನು ಸುವ್ಯವಸ್ಥೆ ಬಗ್ಗೆ ಕಾರ್ಯಕ್ರಮ ನಡೆಯುವ ಮುನ್ನ ಪೊಲೀಸ್ ಇಲಾಖೆಯಿಂದ ವರದಿ ಪಡೆದು, ನಂತರ ಸದರಿ ವರದಿಯ ಆಧಾರದ ಮೇರೆಗೆ ಕಾರ್ಯಕ್ರಮ ನಡೆಸಲು ಅನುಮತಿ ನೀಡುವ ಬಗ್ಗೆ ಪರಿಶೀಲಿಸುವುದು.

16. ಪ್ರವಾಸೋದ್ಯಮ ಕಾರ್ಯಕ್ರಮ ನಡೆಯುವ ಪೂರ್ವದಲ್ಲಿ ಕಾನೂನು ಸುವ್ಯವಸ್ಥೆ ಬಗ್ಗೆ ಕಾರ್ಯಕ್ರಮ ನಡೆಯುವ ಮುನ್ನ ಪೊಲೀಸ್ ಇಲಾಖೆಯಿಂದ ವರದಿ ಪಡೆದು, ನಂತರ ಸದರಿ ವರದಿಯ ಆಧಾರದ ಮೇರೆಗೆ ಕಾರ್ಯಕ್ರಮ ನಡೆಸಲು ಅನುಮತಿ ನೀಡುವ ಬಗ್ಗೆ ಪರಿಶೀಲಿಸುವುದು.

17. ಜಿಲ್ಲಾಮಟ್ಟದ ಸಮಿತಿಯು ಪ್ರವಾಸೋದ್ಯಮ ಕಾರ್ಯಕ್ರಮಗಳ ಬಗ್ಗೆ ಮೇಲುಸ್ತುವಾರಿ ನೋಡಿಕೊಳ್ಳಲು ಸ್ಥಳೀಯ ಅಧಿಕಾರಿಗಳನ್ನೊಳಗೊಂಡಂತೆ ಒಂದು ಉಪಸಮಿತಿಯನ್ನು ರಚಿಸಿ ಆ ಉಪಸಮಿತಿಯು ಕಾರ್ಯಕ್ರಮದ ಪ್ರತಿನಿತ್ಯದ ಕಾರ್ಯಚಟುವಟಿಕೆಯ ಬಗ್ಗೆ ನಿಗಾವಹಿಸಿ, ಪರಿಶೀಲಿಸಿ, ಜಿಲ್ಲಾಮಟ್ಟದ ಸಮಿತಿಗೆ ಆಯಾಯ ದಿನವೆ ವರದಿ ಮಾಡುವಂತೆ ಕ್ರಮಕೈಗೊಳ್ಳುವುದು.

18. ಉಪಸಮಿತಿಯ ವರದಿಯ ಮೇರೆಗೆ ಜಿಲ್ಲಾಮಟ್ಟದ ಸಮಿತಿಯು ಪರಿಶೀಲಿಸಿ ಕಾರ್ಯಕ್ರಮದಿಂದ ಸಾರ್ವಜನಿಕ ಜನಜೀವನಕ್ಕೆ, ಪ್ರಾಕೃತಿಕ ಸೌಂದರ್ಯಕ್ಕೆ, ಪರಿಸರಕ್ಕೆ ಹಾನಿವುಂಟಾಗಿರುವುದು/ಉಂಟಾಗುತ್ತಿರುವುದು, ನಮ್ಮ ಸಂಸ್ಕೃತಿಗೆ ಧಕ್ಕೆ ಉಂಟಾಗುತ್ತಿರುವುದು ಕಂಡುಬಂದಲ್ಲಿ ಕಾರ್ಯಕ್ರಮವನ್ನು ಕೂಡಲೇ ರದ್ದುಗೊಳಿಸುವ ಬಗ್ಗೆ ಸೂಕ್ತ ತೀರ್ಮಾನ ತೆಗೆದುಕೊಳ್ಳುವ ಕುರಿತು ಜಿಲ್ಲಾಮಟ್ಟದ ಸಮಿತಿಗೆ ಸಂಪೂರ್ಣ ಅಧಿಕಾರ ನೀಡುವುದು.

19. ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ನಡೆಸಿದಲ್ಲಿ ಪ್ರವಾಸಿಗರು ಕಾರ್ಯಕ್ರಮ ನಡೆಯುವ ಸ್ಥಳದಲ್ಲಿ ರಾತ್ರಿ ವೇಳೆ ಅಲ್ಲಿ ತಂಗಲು ಅವಕಾಶ ನೀಡದಂತೆ, ಪ್ರವಾಸಿಗರು ಹಿಂದಿರುಗಲು ಸಮರ್ಪಕ ಸಾರಿಗೆ ವ್ಯವಸ್ಥೆ ಕಲ್ಪಿಸುವುದು.

20. ಇನ್ನು ಮುಂದೆ ಪ್ರವಾಸಿಗರವನ್ನು ಸೆಳೆಯಲು/ಆಕರ್ಷಿಸಲು ಮತ್ತು ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸುವ ಸಂಬಂಧ ಪ್ರವಾಸೋದ್ಯಮ ಇಲಾಖೆಯ ಪ್ರವಾಸಿ ಮೇಳಗಳು, ರೋಡ್–ಷೋ, ಟಾಯ್, ಆಯೋಟಾ, ಟಿಟಿಎಫ್, ಇತ್ಯಾದಿ ಟೂರ್ ಮತ್ತು ಟ್ರಾವಲ್ ಫೇರ್‌ಗಳನ್ನು ಹೊರತುಪಡಿಸಿ ಪ್ರವಾಸಿ ತಾಣಗಳಲ್ಲಿ ಅಥವಾ ಇತರೆ ಸ್ಥಳಗಳಲ್ಲಿ ಖಾಸಗಿ ವ್ಯಕ್ತಿಗಳು/ಸಂಸ್ಥೆಗಳು ಆಯೋಜಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಪ್ರವಾಸೋದ್ಯಮ ಲೋಗೋವನ್ನು ಬಳಸಿ ಕಾರ್ಯಕ್ರಮ ನಡೆಸಲು ಸರ್ಕಾರದ ಪೂರ್ವಾನುಮತಿ ಪಡೆಯುವುದು ಕಡ್ಡಾಯವಾಗಿರುತ್ತದೆ.

21. ವಿದೇಶ ಪ್ರವಾಸಿಗರು ಪ್ರವಾಸೋದ್ಯಮ ಕಾರ್ಯಕ್ರಮದಲ್ಲಿ ಭಾಗವಹಿಸುವುದಾದರೆ ಅಂತಹ ಪ್ರವಾಸಿಗರ ಪೂರ್ಣ ವಿವರವನ್ನು ಪೊಲೀಸ್ ಇಲಾಖೆ ಮೊದಲೇ ಪಡೆದುಕೊಳ್ಳುವುದು.

22. ಪ್ರವಾಸೋದ್ಯಮ ಕಾರ್ಯಕ್ರಮಗಳಿಂದ ಸಾರ್ವಜನಿಕ ಜೀವನಕ್ಕೆ ಧಕ್ಕೆ ಮತ್ತು ಕಾನೂನು ಸುವ್ಯವಸ್ಥೆಗೆ ಭಂಗ ಬರುವಂತಹ ಸನ್ನಿವೇಶವಿದ್ದಲ್ಲಿ ಅದರ ಬಗ್ಗೆ ಪೊಲೀಸ್ ಇಲಾಖೆಯಿಂದ ಪರಿಶೀಲಿಸಿ, ಕೂಡಲೇ ಕಾನೂನು ಸುವ್ಯವಸ್ಥೆ ಕಾಪಾಡಲು ಕ್ರಮವಹಿಸುವುದು.

23. ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ನಡೆಸಲು ಅನುಮತಿ ನೀಡುವಾಗ ಭಾರತೀಯ ಸಂಸ್ಕೃತಿಗೆ ಧಕ್ಕೆ ಬರುವಂತಹ ಕಾರ್ಯಕ್ರಮಗಳನ್ನು ನಡೆಸದಂತೆ ಪ್ರಾಯೋಜಕರಿಗೆ ಷರತ್ತಿಗೊಳಪಡಿಸಿ ಅನುಮತಿ ನೀಡುವುದು.

24. ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ವಿಡಿಯೋ ಚಿತ್ರೀಕರಣ ನಡೆಸಲು ಮತ್ತು ಸಿ.ಡಿ.ಯನ್ನು ಸಮಿತಿಯ ಸದಸ್ಯ ಕಾರ್ಯದರ್ಶಿಗಳಿಗೆ ತಲುಪಿಸಿ ಸ್ವೀಕೃತಿ ಪಡೆಯುವ ಷರತ್ತನ್ನು ವಿಧಿಸಿ ಕಾರ್ಯಕ್ರಮ ಆಯೋಜಕರಿಗೆ ಅನುಮತಿ ನೀಡುವುದು ಅತೀ ಸೂಕ್ಷ್ಮ ಸನ್ನಿವೇಶಗಳಲ್ಲಿ ಸರ್ಕಾರದ ಪ್ರವಾಸೋದ್ಯಮ ಇಲಾಖೆ ಮತ್ತು ಪೊಲೀಸ್ ಇಲಾಖೆಯಿಂದ ಸಹ ಅಗತ್ಯ ವಿಡಿಯೋ ಚಿತ್ರೀಕರಣ ಮಾಡಿಸುವುದು.
25. ಖಾಸಗಿ ಸಂಸ್ಥೆಯವರು ಪ್ರವಾಸೋದ್ಯಮ ಕಾರ್ಯಕ್ರಮಗಳಿಗೆ/ಉತ್ಸವಗಳಿಗೆ ಸರ್ಕಾರದಿಂದ ಧನಸಹಾಯ/ಪ್ರಾಯೋಜಕತ್ವ ಕೋರುವುದಾದಲ್ಲಿ ಆ ಸಂಸ್ಥೆಗಳು ಕಳೆದ 5 ವರ್ಷಗಳಿಂದ ನಡೆಸಿರುವ ಚಟುವಟಿಕೆಗಳ ಬಗ್ಗೆ ಮಾಹಿತಿ ಪಡೆಯುವುದು.
26. ರಾಜ್ಯದ ಪ್ರವಾಸಿ ತಾಣಗಳಲ್ಲಿ ಖಾಸಗಿ ಸಂಸ್ಥೆಗಳು ಪ್ರವಾಸೋದ್ಯಮ ಕಾರ್ಯಕ್ರಮಗಳನ್ನು ಆಯೋಜಿಸಿ, ಪ್ರವಾಸೋದ್ಯಮ ಇಲಾಖೆಯಿಂದ ಅನುದಾನ/ಪ್ರಾಯೋಜಕತ್ವ ನೀಡುವ ಬಗ್ಗೆ ರಾಜ್ಯ ಮಟ್ಟದಲ್ಲಿ ನೇರವಾಗಿ ಅನುಮತಿ ನೀಡದೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳನ್ನೊಳಗೊಂಡ ಜಿಲ್ಲಾಮಟ್ಟದ ಸಮಿತಿಯಿಂದ ಶಿಫಾರಸ್ಸನ್ನು ಪಡೆದು ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಪ್ರಸ್ತಾವನೆ ಸಮಂಜಸವಾಗಿದಲ್ಲಿ ಮಾತ್ರ ಕಾರ್ಯಕ್ರಮ ಆಯೋಜನೆಗೆ ಅನುಮತಿ ನೀಡಲು ಪರಿಗಣಿಸುವುದು.
27. ಮೇಲ್ಕಂಡ ಎಲ್ಲಾ ಅಂಶಗಳನ್ನು ಕಾನೂನುಬದ್ಧವಾಗಿ ಪಾಲಿಸುವ ಬಗ್ಗೆ ಸಂಬಂಧಪಟ್ಟ ಕಾರ್ಯಕ್ರಮದ ಆಯೋಜಕರಿಂದ ಪ್ರಮಾಣ ಪತ್ರವನ್ನು ಕಾರ್ಯಕ್ರಮದ ಮುಂಚಿತವಾಗಿ ಪಡೆದುಕೊಳ್ಳುವುದು.
28. ಇದಲ್ಲದೆ ಯಾವುದೇ ಕಾರ್ಯಕ್ರಮದಲ್ಲಿ ಯಾವುದೇ ಕಾನೂನುಗಳ ನಿಯಮಗಳ ಉಲ್ಲಂಘನೆಯಾದಲ್ಲಿ ಸಂಬಂಧಪಟ್ಟ ಇಲಾಖೆಯು ಕಾನೂನಿನಡಿಯಲ್ಲಿ ಕ್ರಮಕೈಗೊಳ್ಳುವುದು ಸಂಬಂಧಪಟ್ಟ ಜಿಲ್ಲಾ ಮಟ್ಟದ ಇಲಾಖೆಯ ಅಧಿಕಾರಿಗಳ ಆದ್ಯ ಕರ್ತವ್ಯ ಹಾಗೂ ಜವಾಬ್ದಾರಿಯಾಗಿರುತ್ತದೆ.

**P.R. 919**
**SC-500**

**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಜಂಟಿ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕತೆಯಲ್ಲಿ ರಾಜ್ಯ ವನ್ಯಜೀವಿ ಮಂಡಳಿಗೆ ಒಂದು ಉಪ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಪ್ರಮುಅಸಂ(ವಜೀ)/ಬಿ2/ಸಿಆರ್–10/14–15, ದಿನಾಂಕ : 30–08–2014.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 30–08–2014ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು ಇವರು ದಿನಾಂಕ : 15–07–2014ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ 7ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಇಲಾಖೆಯು ತೆಗೆದುಕೊಳ್ಳುತ್ತಿರುವ ರಕ್ಷಣಾ ಚಟುವಟಿಕೆಗಳಿಗೆ ಇನ್ನೂ ಹೆಚ್ಚಿನ ಗಮನ ನೀಡಲು, ಸಕಾಲಿಕ ತೀರ್ಮಾನಗಳನ್ನು ತೆಗೆದುಕೊಳ್ಳಲು ಹಾಗೂ ತದನಂತರ ಕಾರ್ಯಗತಗೊಳಿಸಲು ಮತ್ತು ಮಂಡಳಿಯ ಅಂತಿಮ ತೀರ್ಮಾನಕ್ಕೆ ಶಿಫಾರಸ್ಸು ಮಾಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಾಜ್ಯ ವನ್ಯಜೀವಿ ಮಂಡಳಿಗೆ ಒಂದು ಉಪ ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು | ಅಧ್ಯಕ್ಷರು |
| 2. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು | ಸದಸ್ಯರು |
| 3. | ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | ಸದಸ್ಯ–ಕಾರ್ಯದರ್ಶಿ |
| 4. | ಶ್ರೀ ಸಂಜಯ್ ಗುಬ್ಬಿ, ಪರಿಸರ ಶಾಸ್ತ್ರಜ್ಞ, ಬೆಂಗಳೂರು | ಸದಸ್ಯರು |
| 5. | ಶ್ರೀ ರಾಣಾ ಜಾರ್ಜ್, ಮೆ॥ ಕೆಳಚಂದ್ರ ಗ್ರೂಪ್ ಆಫ್ ಕಂಪನಿ, ನಂ. 16, ಸೇಂಟ್ ಮಾರ್ಕ್ಸ್ ರೋಡ್, ಬೆಂಗಳೂರು | ಸದಸ್ಯರು |
| 6. | ಶ್ರೀ ಅಜಯ್ ಎ ದೇಸಾಯಿ, ಬಿ.ಸಿ. 84, ಕ್ಯಾಂಪ್, ಬೆಳಗಾಂ | ಸದಸ್ಯರು |
| 7. | ಡಾ॥ ಸೂರ್ಯ ಎನ್.ಆರ್. ಅದೂರ್, ಎಂ.ಎ. 32, ಕೆಹೆಚ್‌ಬಿ, ಏರಿಯಾ, ಪೋಸ್ಟ್ ಬಜಲ್, ಎಕ್ಕೂರ್, ಮಂಗಳೂರು | ಸದಸ್ಯರು |

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಎಫ್‌ಇಇ 361 ಎಫ್‌ಡಬ್ಲ್ಯೂಎಲ್ 2014, ಬೆಂಗಳೂರು, ದಿನಾಂಕ : 07–11–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ : 15–07–2014ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ 7ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಇಲಾಖೆಯು ತೆಗೆದುಕೊಳ್ಳುತ್ತಿರುವ ರಕ್ಷಣಾ ಚಟುವಟಿಕೆಗಳಿಗೆ ಇನ್ನೂ ಹೆಚ್ಚಿನ ಗಮನ ನೀಡಲು, ಸಕಾಲಿಕ ತೀರ್ಮಾನಗಳನ್ನು ತೆಗೆದುಕೊಳ್ಳಲು ಹಾಗೂ ತದನಂತರ ಕಾರ್ಯಗತಗೊಳಿಸಲು ಮತ್ತು ಮಂಡಳಿಯ ಅಂತಿಮ ತೀರ್ಮಾನಕ್ಕೆ ಶಿಫಾರಸ್ಸು ಮಾಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಾಜ್ಯ ವನ್ಯಜೀವಿ ಮಂಡಳಿಗೆ ಒಂದು ಉಪ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು | ಅಧ್ಯಕ್ಷರು |
| 2. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು | ಸದಸ್ಯರು |
| 3. | ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | ಸದಸ್ಯ–ಕಾರ್ಯದರ್ಶಿ |
| 4. | ಶ್ರೀ ಸಂಜಯ್ ಗುಬ್ಬಿ, ಪರಿಸರ ಶಾಸ್ತ್ರಜ್ಞ, ಬೆಂಗಳೂರು | ಸದಸ್ಯರು |
| 5. | ಶ್ರೀ ರಾಣಾ ಜಾರ್ಜ್, ಮೆ॥ ಕೆಳಚಂದ್ರ ಗ್ರೂಪ್ ಆಫ್ ಕಂಪನಿ, ನಂ. 16, ಸೇಂಟ್ ಮಾರ್ಕ್ಸ್ ರೋಡ್, ಬೆಂಗಳೂರು | ಸದಸ್ಯರು |
| 6. | ಶ್ರೀ ಅಜಯ್ ಎ ದೇಸಾಯಿ, ಬಿ.ಸಿ. 84, ಕ್ಯಾಂಪ್, ಬೆಳಗಾಂ | ಸದಸ್ಯರು |
| 7. | ಡಾ॥ ಸೂರ್ಯ ಎನ್.ಆರ್. ಅದೂರ್, ಎಂ.ಎ. 32, ಕೆಹೆಚ್‌ಬಿ, ಏರಿಯಾ, ಪೋಸ್ಟ್ ಬಜಲ್, ಎಕ್ಕೂರ್, ಮಂಗಳೂರು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
(ವನ್ಯಜೀವಿ ಮತ್ತು ಯೋಜನೆಗಳು).

**P.R. 928**
**SC-600**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಶಿವಮಾದು, ದ್ವಿತೀಯ ದರ್ಜೆ ಸಹಾಯಕರು, ಉಪ ಖಜಾನೆ, ಚನ್ನಪಟ್ಟಣ ಅವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಆಇ 67 ಆಖಇ 2001, ದಿನಾಂಕ : 03–03–2011
2. ಶ್ರೀ ಎ.ಕೃಷ್ಣಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶಕರು ಸಲ್ಲಿಸಿದ ವಿಚಾರಣಾ ವರದಿ ದಿನಾಂಕ : 27–12–2012.
3. ಆಪಾದಿತರಿಗೆ ನೀಡಿದ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ : ಆಇ 67 ಆಖಇ 2001 (ಭಾ), ದಿನಾಂಕ : 22–01–2013.
4. 2ನೇ ಕಾರಣ ಕೇಳುವ ನೋಟೀಸ್‌ಗೆ ಆಪಾದಿತರು ನೀಡಿದ ಉತ್ತರ ದಿನಾಂಕ : 20–02–2013.
5. ಪತ್ರ ಸಂಖ್ಯೆ : ಆಇ 67 ಆಖಇ 2001(ಭಾ), ದಿನಾಂಕ : 10–10–2014.
6. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 181 ಸಿಎನ್‌ಎಸ್ 14, ದಿನಾಂಕ : 13–11–2014.

**ಪ್ರಸ್ತಾವನೆ :**

ಬೆಂಗಳೂರು ನಗರ ಜಿಲ್ಲಾ ಖಜಾನೆಯ ಚೆಕ್ ವಿತರಣಾ ಶಾಖೆಯಲ್ಲಿ 1999–2001ರ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳೊಡನೆ ಶಾಮೀಲಾಗಿ ಶಿಕ್ಷಕರ ಬೋಗಸ್ ವೇತನ ಬಿಲ್‌ಗಳನ್ನು ಸೃಷ್ಟಿಸಿ ಪಾಸಾದ 65 ಚೆಕ್‌ಗಳನ್ನು ಕೆಟಿಸಿ ವಹಿ–66ರಲ್ಲಿ ನಮೂದಿಸದೇ ಮೋಸಗಾರರಿಗೆ ಹಸ್ತಾಂತರಿಸಿ ರೂ. 50,65,280/ಗಳ ಸರ್ಕಾರಿ ಹಣವನ್ನು ವಂಚಿಕರ ಪಾಲು ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಇತರರೊಡನೆ ಶ್ರೀ ಶಿವಮಾದು, ದ್ವಿತೀಯ ದರ್ಜೆ ಸಹಾಯಕರು, ಖಜಾನೆ ಇಲಾಖೆ ಅವರ ವಿರುದ್ಧವೂ ಸಹ ಮೇಲೆ (1)ರಲ್ಲಿ ಓದಲಾದ ದಿನಾಂಕ : 03–03–2011ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಎ. ಕೃಷ್ಣಪ್ಪ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ : 27–12–2012ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

ಕೌಂಟರ್ ಗುಮಾಸ್ತರಾಗಿ ಮೊದಲ ಬಾರಿಗೆ ವಿವಿಧ ಇಲಾಖೆಗಳಿಂದ ಮತ್ತು ಬ್ಯಾಂಕ್‌ಗಳಿಂದ ಬಂದ ಬಿಲ್ಲುಗಳನ್ನು ತೆಗೆದುಕೊಂಡು ಅದಕ್ಕೆ ಟೋಕನನ್ನು ಬಿಲ್ಲುಗಳನ್ನು ತಂದವರಿಗೆ ನೀಡುವುದು, ನಂತರ ಆ ಬಿಲ್ಲುಗಳನ್ನು ಕೆ.ಟಿ.ಸಿ. 66ರ ನಮೂನೆಯಲ್ಲಿ ನಮೂದಿಸಿ ಆ ಬಿಲ್ಲುಗಳನ್ನು ಬಿಲ್ ಸೆಕ್ಷನ್‌ಗೆ ಸಲ್ಲಿಸುವುದು ಇವರ ಜವಾಬ್ದಾರಿಯಾಗಿರುತ್ತದೆ. ಬಿಲ್ ಸೆಕ್ಷನ್‌ನಲ್ಲಿ ಬಿಲ್ಲುಗಳನ್ನು ನಿಯಮಾನುಸಾರ ಪರಿಶೀಲಿಸಿ ಅವುಗಳನ್ನು ಪಾಸ್ ಮಾಡಿದ ನಂತರ ಅಂತಹ ಬಿಲ್ಲುಗಳಿಗೆ ಚೆಕ್ ಸೆಕ್ಷನ್‌ನಲ್ಲಿ ಚೆಕ್‌ಗಳನ್ನು ಬರೆದು ನಂತರ ಸಹಾಯಕ ಖಜಾನೆ ಅಧಿಕಾರಿಯವರು ಬಿಲ್ಲುಗಳನ್ನು ರುಜು ಮಾಡಿದ ನಂತರ ಅವುಗಳು ಪುನಃ ಸಂಬಂಧಪಟ್ಟವರಿಗೆ ವಿತರಣೆ ಮಾಡಲು ವಿತರಣಾ ಕೌಂಟರ್‌ಗೆ ಹೋಗುವುದು. ಅಲ್ಲಿ ಆಪಾದಿತರಾದ ಶಿವಮಾದುರವರು ವಿತರಣೆ ಕಳುಹಿಸಿದ ಚೆಕ್ಕುಗಳನ್ನು ಸಂಬಂಧಪಟ್ಟ ವ್ಯಕ್ತಿಗಳಿಂದ ಟೋಕನ್ ಪಡೆದು ರುಜು ಮಾಡಿದ ಚೆಕ್‌ಗಳನ್ನು ನೀಡಬೇಕಾಗಿರುತ್ತದೆ. ಈ ರೀತಿ ಸಹಿಯಾದ ಚೆಕ್‌ಗಳು ಬಿಲ್ಲುಗಳ ಸಮೇತ ಚೆಕ್ ವಿತರಣಾ ಕೌಂಟರ್‌ಗೆ ಹೋಗುತ್ತಿದ್ದು, ಕೆ.ಟಿ.ಸಿ. 66ರಲ್ಲಿ ದಾಖಲಿಸಿ ಚೆಕ್ ವಿತರಿಸಿ ಬಿಲ್ಲುಗಳನ್ನು ಲೆಕ್ಕ ಶಾಖೆಗೆ ಕಳುಹಿಸುವ ಜವಾಬ್ದಾರಿ ಚೆಕ್ಕು ವಿತರಿಸುವ ವಿಷಯ ನಿರ್ವಾಹಕರಾದ ಆರೋಪಿಯದ್ದಾಗಿರುತ್ತದೆ.

ಆದರೆ ಪ್ರಸ್ತುತ ಪ್ರಕರಣದಲ್ಲಿ ವಿತರಣೆಗೆ ಚೆಕ್‌ಗಳನ್ನು ಚೆಕ್ ಶಾಖೆಯಿಂದ ಪಡೆದಿದ್ದಕ್ಕೆ ಸ್ವೀಕೃತಿ ಇಲ್ಲದ ಪ್ರಯುಕ್ತ ಅದರ ನೆಪ ಪಡೆದು ಆಪಾದಿತರು ವಿತರಣಾ ಚೆಕ್‌ಗಳು ನನ್ನ ಕೌಂಟರ್‌ಗೆ ಬಂದಿರುವುದಿಲ್ಲ ಮತ್ತು ಅವುಗಳನ್ನು ಕೆ.ಟಿ.ಸಿ. 66ರಲ್ಲಿ ನಮೂದಿಸಿರುವುದಿಲ್ಲ ಮತ್ತು ಮೂಲ ಬಿಲ್ಲುಗಳು ಮತ್ತು 65 ಚೆಕ್‌ಗಳು ಕಾಣೆಯಾಗಿರುವುದಕ್ಕೆ ನಾನು ಜವಾಬ್ದಾರನಾಗಿರುವುದಿಲ್ಲ ಎಂದು ವಾದ ಮಂಡಿಸಿದ್ದಾರೆ. ಈ ಹೇಳಿಕೆಯನ್ನು ಯಾವ ಕಾರಣಕ್ಕೂ ಒಪ್ಪಲು ಸಾಧ್ಯವಿಲ್ಲ. ಕಾರಣ ಚೆಕ್‌ಗಳು ಚೆಕ್ ಸೆಕ್ಷನ್‌ನಲ್ಲಿ ಸಹಾಯಕ ಖಜಾನಾಧಿಕಾರಿಯವರು ರುಜು ಮಾಡಿದ ನಂತರ ಅದು ವಿತರಣಾ ಕೌಂಟರ್‌ಗೆ

ಹೋಗಬೇಕಾಗಿರುತ್ತದೆ. ಆದರೆ ಈ ಪ್ರಕರಣದಲ್ಲಿ ಆಪಾದಿತರು ವಿತರಣಾ ಕೌಂಟರ್‌ಗೆ ಆ ಚೆಕ್‌ಗಳು ಬಂದಿರುವುದಿಲ್ಲ ಎಂದು ಮಂಡಿಸಿರುವ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಅದನ್ನು ಈ ಮೂಲಕ ತಳ್ಳಿ ಹಾಕಲಾಗಿದೆ. ಕಾರಣ ಚೆಕ್‌ಗಳು ಬರೆದ ನಂತರ ಅವುಗಳ ಚೆಕ್ ಶಾಖೆಯಲ್ಲಿಯೇ ಉಳಿದುಕೊಳ್ಳುವುದಿಲ್ಲ. ಅವುಗಳು ನಿಯಮಾನುಸಾರ ವಿತರಣಾ ಕೌಂಟರ್‌ಗೆ ಹೋಗಿ ಅಲ್ಲಿ ಸಂಬಂಧಪಟ್ಟವರಿಂದ ಟೋಕನ್ ಪಡೆದು ವಿತರಣೆ ಆಗಬೇಕಾಗಿರುತ್ತದೆ. ಈ ಪ್ರಕ್ರಿಯೆಯಲ್ಲಿ ಆಪಾದಿತರ ಪಾತ್ರ ಅಥವಾ ಕೈವಾಡ ಇಲ್ಲದೆ ಅವುಗಳು ಮೋಸಗಾರರ ಕೈಗೆ ತಲುಪಲು ಸಾಧ್ಯವಿರುವುದಿಲ್ಲ. ಆದ್ದರಿಂದ ಅವರ ವಿರುದ್ಧ 2 ಆರೋಪಗಳು ಸಾಬೀತಾಗಿವೆ.

ವಿಚಾರಣಾ ವರದಿಯ ಪ್ರತಿಯೊಡನೆ ಆರೋಪ ಸಾಬೀತಾದ ಶ್ರೀ ಶಿವಮಾದು ದ್ವಿ.ದ.ಸ. ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 22–01–2013ರ 2ನೇ ಕಾರಣ ಕೇಳುವ ನೋಟೀಸು ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಶಿವಮಾದು ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ : 20–02–2013ರ ಉತ್ತರ ನೀಡಿ ವಿಚಾರಣಾಧಿಕಾರಿಗಳು ತನಗೆ ಸಹಜ ನ್ಯಾಯ ತತ್ವದಂತೆ ಅವಕಾಶವನ್ನು ನೀಡಿಲ್ಲ. ವಿಚಾರಣಾ ವರದಿಯನ್ನು ನಿಯಮಾನುಸಾರ ಸಿದ್ಧಪಡಿಸಿಲ್ಲ. ಚೆಕ್ಕುಗಳು ತನ್ನ ಕೌಂಟರಿಗೆ ಬಾರದಿರುವಾಗ ತಾನು ವಿತರಿಸಿದ ಚೆಕ್‌ನ ಕೆ.ಟಿ.ಸಿ.–66 ನಮೂನೆ ಬರೆಯುವ ಸಂದರ್ಭ ಇಲ್ಲವೆಂಬ ತಮ್ಮ ವಾದವನ್ನು ಒಪ್ಪಿಕೊಳ್ಳಲಿಲ್ಲ. ಬಿಲ್ ಶಾಖೆಯಲ್ಲಿದ್ದ ಅಧಿಕಾರ/ನೌಕರರು ಹೊಣೆಗಾರಿಕೆಯಿಂದ ಕಾರ್ಯನಿರ್ವಹಿಸಿಲ್ಲ. ಆದಾಗ್ಯೂ ಅವರುಗಳನ್ನು ವಿಚಾರಣೆಗೆ ಒಳಪಡಿಸಿಲ್ಲ. ಚೆಕ್ ವಿತರಣೆ ಶಾಖೆಯ ಕೌಂಟರ್ ಕ್ಲರ್ಕ್ ಆದ ತನಗೆ ಚೆಕ್ಕುಗಳು ಸ್ವೀಕೃತಿಯಾದ ಕುರಿತು ವಿಚಾರಣೆಯಲ್ಲಿ ಯಾವುದೇ ದಾಖಲೆಗಳನ್ನು ಹಾಜರು ಪಡಿಸಿಲ್ಲ. ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೆ ತನ್ನನ್ನು ಆರೋಪ ಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಆರೋಪಿಯ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ವಿಚಾರಣೆಯು ನಿಯಮಾನುಸಾರ ನಡೆದಿದ್ದು, ಆರೋಪಿಗೆ ವಿಫುಲವಾದ ಅವಕಾಶವನ್ನು ವಿಚಾರಣಾಧಿಕಾರಿಗಳು ನೀಡಿದ್ದಾರೆ. ಅದರಲ್ಲಿಯೂ ಕೆ.ಟಿ.ಸಿ. ನಮೂನೆ–66 ಕುರಿತು ಆರೋಪಿಯ ವಾದವನ್ನು ವಿವರವಾಗಿಯೇ ಚರ್ಚಿಸಿದ್ದಾರೆ. ಶಿಕ್ಷಣ ಸಂಸ್ಥೆಗಳು ಸಲ್ಲಿಸಿದ ಬಿಲ್ಲುಗಳನ್ನು ಚೆಕ್ ಶಾಖೆಗೆ ಕಳುಹಿಸುವ ಮುನ್ನ ಬಿಲ್ ಶಾಖೆಯಲ್ಲಿ ಬಿಲ್ ಪಾಸು ಮಾಡುವ ಅಧಿಕಾರಿಯು ನಿಯಮಾನುಸಾರ ಪರಿಶೀಲಿಸಿದ್ದರೆ ಸದರಿ ಬೋಗಸ್ ಬಿಲ್ಲುಗಳು ಪಾಸಾಗಿ ಚೆಕ್ ಶಾಖೆಗೆ ಬರುವ ಸಂದರ್ಭ ಉಂಟಾಗುತ್ತಿರಲಿಲ್ಲ. ಹಾಗೆಯೆ ಚೆಕ್ ವಿತರಣಾ ಶಾಖೆಯಲ್ಲಿನ ಕೌಂಟರ್ ಕ್ಲರ್ಕ್ ಆದ ಶ್ರೀ ಶಿವಮಾದು, ದ್ವಿತೀಯ ದರ್ಜೆ ಸಹಾಯಕರು, ತಾನು ವಿತರಿಸಿದ ಚೆಕ್‌ಗಳ ಪ್ಲಸ್ ಮತ್ತು ಮೈನಸ್ ತಃಖ್ತೆ ಸಿದ್ಧಪಡಿಸಿ ಅದನ್ನು ಮುಖ್ಯ ಲೆಕ್ಕಿಗರ ಮೂಲಕ ಬಿಲ್ ಶಾಖೆಯೊಡನೆ ಹೋಲಿಕೆಯನ್ನು ಕೈಗೊಂಡು ಸದರಿ ಬೋಗಸ್ ಬಿಲ್ಲುಗಳು ಬ್ಯಾಂಕ್‌ನಲ್ಲಿ ಪಾವತಿ ಆಗುವುದನ್ನು ತಡೆಯಬೇಕಾಗಿದ್ದು ಅವರಿಗೆ ನಿಗಧಿಪಡಿಸಿದ ಕರ್ತವ್ಯ ಆಗಿತ್ತು. ಆದರೆ ಅವರು ನಿಯಮಾನುಸಾರ ಅದನ್ನು ನಿರ್ವಹಿಸದ ಕಾರಣ ಅಕ್ರಮ ಪಾವತಿ ಆಗಿದೆ. ಚೆಕ್ ಶಾಖೆಯ ಮುಖ್ಯಸ್ಥರಾಗಿದ್ದ ಸಹಾಯಕ ಖಜಾನಾಧಿಕಾರಿಯವರು ಬಿಲ್ ಶಾಖೆಯಿಂದ ಪಾಸಾಗಿ ಬಂದ ಬಿಲ್ಲುಗಳ ಆಧಾರದ ಮೇಲೆ ಹೆಸರು, ಮೊತ್ತ ಇವುಗಳನ್ನು ಚೆಕ್ ಮಾಡಿದನಂತರ ತನ್ನ ಅಧೀನ ನೌಕರರು ಚೆಕ್ ಬರೆದಿರುವುದನ್ನು ಖಚಿತಪಡಿಸಿಕೊಂಡು ಚೆಕ್‌ಗೆ ಸಹಿ ಮಾಡಿ ಚೆಕ್ ವಿತರಣಾ ಶಾಖೆಗೆ ಕೆ.ಟಿ.ಸಿ–64 ಹಾಗೂ ಬಿಲ್‌ನೊಡನೆ ಕಳುಹಿಸಿದ್ದಾರೆ.

ಚೆಕ್ ವಿತರಣಾ ಕೌಂಟರಿನಲ್ಲಿ ಚೆಕ್ ವಿತರಿಸಿ ಅದನ್ನು ಕೆ.ಟಿ.ಸಿ–66ರಲ್ಲಿ ನಮೂದಿಸುವುದು. ಪ್ಲಸ್ ಮತ್ತು ಮೈನಸ್ ತಃಖ್ತೆ ತಯಾರಿಸಿ ಅದನ್ನು Incorporation ಶಾಖೆಗೆ ಕಳುಹಿಸುವ ಕಾರ್ಯ ನಡೆಯುತ್ತದೆ. ವಿಚಾರಣೆಯಲ್ಲಿ ಸಾಕ್ಷಿಗಳ ಹೇಳಿಕೆಯಂತೆ ಚೆಕ್ ವಿತರಣಾ ಶಾಖೆಯ ಕೌಂಟರ್ ಕ್ಲರ್ಕ್ ಆದ ಶ್ರೀ ಶಿವಮಾದು ಅವರು ಈ ಕೆಲಸವನ್ನು ನಿರ್ವಹಿಸಿಲ್ಲ. ಕೌಂಟರ್ ಕ್ಲರ್ಕ್ ಈ ರೀತಿ ಮಾಡಿ ಅದನ್ನು ಶಾಖೆಯ ಹಿರಿಯ ಲೆಕ್ಕಿಗರು ಪರಿಶೀಲಿಸಿ ನ್ಯೂನತೆಗಳು ಕಂಡುಬಂದಲ್ಲಿ ಸಹಾಯಕ ಖಜಾನಾಧಿಕಾರಿಯ ಗಮನಕ್ಕೆ ತರಬೇಕು. ಆದರೆ ತರಲಿಲ್ಲ. ಚೆಕ್ ವಿತರಣಾ ಕೌಂಟರ್ ಕ್ಲರ್ಕ್ ಆದ ಶ್ರೀ ಶಿವಮಾದು, ದ್ವಿತೀಯ ದರ್ಜೆ ಸಹಾಯಕ ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸಿಲ್ಲ. ಅವರಿಂದ ನಿಯಮ ಉಲ್ಲಂಘನೆಯಾಗಿದೆ. ಚೆಕ್ ಮೋಸಗಾರರ ಪಾಲಾಗಿದೆ. ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿದೆ.

ಚೆಕ್‌ಗಳಿಗೆ ಸಹಾಯಕ ಖಜಾನಾಧಿಕಾರಿಯ ಸಹಿಯಾಗಿದ್ದು ಅವುಗಳ ಪ್ರತಿ ಲಭ್ಯವಿರುವಾಗ ಆ ಚೆಕ್‌ಗಳು ಚೆಕ್ ವಿತರಣಾ ಕೌಂಟರ್‌ಗೆ ಬಾರದೆ ಹೊರ ಹೋಗಲು ಸಾಧ್ಯವೇ ಇಲ್ಲ. 65 ಚೆಕ್‌ಗಳು ಒಟ್ಟಾರೆಯಾಗಿ ವಿತರಣಾ ಕ್ಲರ್ಕ್ ಆದ ಶ್ರೀ ಶಿವಮಾದು ಅವರ ಕೈಸೇರದೇ, ಮುಖ್ಯ ಲೆಕ್ಕಿಗರ ಉಸ್ತುವಾರಿ ಇಲ್ಲದೇ, ನೇರ ರೀತಿಯಲ್ಲಿ ಹೊರಹೋಗುವ ಸಂದರ್ಭಗಳಿರಲು ಸಾಧ್ಯವಿಲ್ಲ. ಈ ಅಕ್ರಮ ಪಾವತಿಯು ಚೆಕ್ ವಿತರಣಾ ಕೌಂಟರ್ ಕ್ಲರ್ಕ್ ಆದ ಶಿವಮಾದು ಮುಖಾಂತರವಲ್ಲದೇ ಬೇರೆ ಯಾರ ಮುಖಾಂತರವೂ ಹೊರಹೋಗಲು ಸಾಧ್ಯವಿಲ್ಲ. ಬಿಲ್ ಶಾಖೆಗೆ ಸಂಬಂಧಪಟ್ಟವರು ವಿಚಾರಣೆಗೆ ಮುಂಚಿತವಾಗಿಯೇ ನಿವೃತ್ತಿ ಹೊಂದಿದ ಕಾರಣ ವಿಚಾರಣೆ ಹೂಡುವ ನಾಲ್ಕು ವರ್ಷಗಳ ಹಿಂದೆ ಜರುಗಿದ ಘಟನೆ ಬಗ್ಗೆ ವಿಚಾರಣೆ ನಡೆಸಲು ಕೆ.ಸಿ.ಎಸ್.ಆರ್ಸ್. ನಿಯಮ 214ರಲ್ಲಿನ (ii)ರಡಿ ವಿಚಾರಣೆ ಹೂಡಲು ಕಾಲಮಿತಿಯ ಕಾರಣ ಸಾಧ್ಯವಾಗಲಿಲ್ಲ. ಆದರೆ ಸಿ.ಓ.ಡಿ. ಹೂಡಿರುವ ಕ್ರಿಮಿನಲ್ ಮೊಕದ್ದಮೆ ಹಾಗೂ ಶಿಕ್ಷಣ ಇಲಾಖೆಯು ಹೂಡಿರುವ ಸಿವಿಲ್ ಮೊಕದ್ದಮೆಗಳಲ್ಲಿ ಅವರು ಆರೋಪಿ ಆಗಿದ್ದಾರೆ.

ಆರೋಪಿತರು ತಾನು ಚೆಕ್ ಸ್ವೀಕರಿಸಿರುವುದಕ್ಕೆ ದಾಖಲೆಗಳನ್ನು ವಿಚಾರಣೆ ಸಮಯದಲ್ಲಿ ಹಾಜರು ಪಡಿಸಿಲ್ಲವೆಂದು ಪ್ರತಿಪಾದಿಸಿದ್ದಾರೆ. ಆದರೆ ದಾಖಲೆಗಳ ಪುಟಗಳನ್ನು ಹರಿದು ಹಾಕಿರುವುದು. ಅವುಗಳನ್ನು ಕಾಣೆಯಾಗಿಸಿರುವುದು, ಆದ್ದರಿಂದ ಅವುಗಳು ಲಭ್ಯವಿಲ್ಲದೇ ಇರುವುದು ವಿಚಾರಣೆಯಲ್ಲಿ ಮೂಡಿಬಂದಿದೆ. ಹೀಗಿರುವಾಗ ದಾಖಲೆಗಳನ್ನು ಹಾಜರುಪಡಿಸಲಿಲ್ಲ ಎಂಬ ಆರೋಪಿತರ ವಾದದಲ್ಲಿ ಯಾವುದೇ ಅರ್ಥವಿರುವುದಿಲ್ಲ.

ಆದ್ದರಿಂದ ಶ್ರೀ ಶಿವಮಾದು ದ್ವಿತೀಯ ದರ್ಜೆ ಸಹಾಯಕ, ಖಜಾನೆ ಇಲಾಖೆ ಇವರ ಉತ್ತರವನ್ನು ಒಪ್ಪಿಕೊಳ್ಳದೇ ಇವರ ವಿರುದ್ಧದ ಎರಡು ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ದಂಡನೆಯನ್ನು ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಂದಿಗೆ ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 67 ಆಖಇ 2001(ಭಾ), ಬೆಂಗಳೂರು, ದಿನಾಂಕ : 03–12–2014.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶಿವಮಾದು, ದ್ವಿತೀಯ ದರ್ಜೆ ಸಹಾಯಕ, ಖಜಾನೆ ಇಲಾಖೆ ಅವರನ್ನು ತಕ್ಷಣದಿಮದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**P.R. 929**

## ಸಹಕಾರ ಸಚಿವಾಲಯ

**ವಿಷಯ :** ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 170 ವೆಚ್ಚ 2/2014, ದಿನಾಂಕ : 28–04–2014.
2. ಸರ್ಕಾರದ ಆದೇಶ ಸಂಖ್ಯೆ : ಸಇ 54 ಅಂಆಸ(ಎ) 2014, ದಿನಾಂಕ : 24–05–2014 ಮತ್ತು 29–05–2014.
3. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 14–10–2014.
4. ಸರ್ಕಾರದ ಆದೇಶ ಸಂಖ್ಯೆ : ಸಇ 210 ಸಿಎಲ್‌ಎಸ್ 2014, ದಿನಾಂಕ : 19–06–2014.
5. ಸರ್ಕಾರದ ಆದೇಶ ಸಂಖ್ಯೆ : ಸಇ 210 ಸಿಎಲ್‌ಎಸ್ 2014, ದಿನಾಂಕ : 23–09–2014 ಮತ್ತು 07–10–2014.
6. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಬ್ಬಂದಿ/08/ಇಜಿಪಿ/2014–15, ದಿನಾಂಕ : 12–11–2014 ಮತ್ತು 15–11–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸಹಕಾರ ಇಲಾಖೆಯ 2014–15ನೇ ಸಾಲಿನ ಕೆಲವು ಯೋಜನೆಗಳನ್ನು ವಿಲೀನಗೊಳಿಸಿ ಲೆಕ್ಕಶೀರ್ಷಿಕೆ 2425–00–004–0–01–059 "ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ" ಯೋಜನೆ ಅಡಿ ರೂ. 12.84 ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶಗಳಲ್ಲಿ ಸಹಕಾರ ಇಲಾಖೆಯ 2014–15ನೇ ಸಾಲಿನ ಮಾರ್ಪಾಟಿತ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಇಲಾಖೆಯ ಕಾರ್ಯಯೋಜನೆಯಡಿ ಅಳವಡಿಸಿ ಅನುಷ್ಠಾನಗೊಳಿಸಲು ರೂ. 12.84 ಲಕ್ಷಗಳಿಗೆ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25 ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ(4)ರ ಸರ್ಕಾರದ ಆದೇಶದಲ್ಲಿ 2014–15ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆ ಅಡಿ ಮೊದಲನೇ ತ್ರೈಮಾಸಿಕದಲ್ಲಿ ರೂ. 3.21 ಲಕ್ಷಗಳನ್ನು ಬಿಡುಗಡೆಗೊಳಿಸಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ಎರಡನೇ ತ್ರೈಮಾಸಿಕದಲ್ಲಿ ರೂ. 3.21 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2014–15ನೇ ಸಾಲಿನಲ್ಲಿ ಸಹಕಾರ ಸಂಘಗಳ "ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ" ಯೋಜನೆಯಡಿ ಬಿಡುಗಡೆಗೆ ಬಾಕಿ ಇರುವ ಮೂರನೇ ಕಂತಿನ ರೂ. 3.21 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2425–00–004–0–01–059 ಅಡಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಯೋಜನೆಯಲ್ಲಿ ಮೊದಲೆರಡು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಯಾಗಿರುವ ರೂ. 6.42 ಲಕ್ಷಗಳ ಪೈಕಿ ರೂ. 4.99 ಲಕ್ಷ ವೆಚ್ಚ ಮಾಡಿದ್ದು ಶೇಕಡಾ 77.72 ಬಳಕೆಯಾಗಿರುವುದಾಗಿ ಸಹಕಾರ ಸಂಘಗಳ ನಿಬಂಧಕರು ದೃಢೀಕೃತ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 210 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ : 04–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2014–15ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಮೂರನೇ ತ್ರೈಮಾಸಿಕದಲ್ಲಿ ರೂ. 3.21 ಲಕ್ಷ (ಮೂರು ಲಕ್ಷದ ಇಪ್ಪತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಸಿ 2014, ದಿನಾಂಕ : 14–10–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 930**
**SC-25**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ನಗರದ ಹೆಬ್ಬಾಳ ಬಡಾವಣೆಯಲ್ಲಿ ಸುಸಜ್ಜಿತ ಕನ್ವೆನ್ಷನ್‌ಹಾಲ್ ನಿರ್ಮಾಣ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ :** ಆಯುಕ್ತರು, ಮೈ.ನ.ಪ್ರಾ. ರವರ ಪತ್ರ ಸಂಖ್ಯೆ : ಮೈ.ನ.ಪ್ರಾ/ಆಆಶಾ/2013–14, ದಿನಾಂಕ : 18–02–2014.

**ಪ್ರಸ್ತಾವನೆ :**

ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಮೈಸೂರು ರವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಮೈಸೂರು ನಗರದ ಹೆಬ್ಬಾಳ ಬಡಾವಣೆಯಲ್ಲಿ ಸುಸಜ್ಜಿತ ಕನ್ವೆನ್ಷನ್‌ಹಾಲ್ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಅಂದಾಜು ವಿವರಗಳನ್ನು ತಯಾರಿಸಿರುವುದಾಗಿ, ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಐಟಂಗಳನ್ನು ಹಾಗೂ ಲೋಕೋಪಯೋಗಿ (ವಿದ್ಯುತ್) ಮೈಸೂರು ವೃತ್ತ 2010–11ನೇ ಸಾಲಿನ ಎಸ್.ಆರ್. ದರಪಟ್ಟಿಗೆ ಅನುಗುಣವಾಗಿ ಅಂದಾಜು ಪಟ್ಟಿಯನ್ನು ರೂ. 301.00 ಲಕ್ಷಗಳಿಗೆ ಸಿದ್ಧಪಡಿಸಲಾಗಿರುತ್ತದೆ. ಸದರಿ ಕಾಮಗಾರಿಯನ್ನು ಪ್ರಾಧಿಕಾರದ 2013–14ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಈ ಸಂಬಂಧ 2013–14ನೇ ಸಾಲಿನಲ್ಲಿ ರೂ. 100.00 ಲಕ್ಷಗಳ ಅನುದಾನವನ್ನು ಕಾಯ್ದಿರಿಸಲಾಗಿರುತ್ತದೆ. ಕಾಮಗಾರಿಗೆ ಅವಶ್ಯವಿರುವ ಉಳಿಕೆ ಅನುದಾನವನ್ನು 2014–15ನೇ ಸಾಲಿನಲ್ಲಿ ಪ್ರಾಧಿಕಾರ ಆಯವ್ಯಯದಲ್ಲಿ ಅಳವಡಿಸಿಕೊಳ್ಳಲಾಗುವುದು ಎಂದು ಸದರಿ ಕಾಮಗಾರಿಗೆ ಅಂದಾಜು ಮೊತ್ತವಾದ ರೂ. 301.00 (ರೂಪಾಯಿ ಮೂರುನೂರಾ ಒಂದು ಲಕ್ಷಗಳು) ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 204 ಮೈಅಪ್ರಾ 2014, ಬೆಂಗಳೂರು, ದಿನಾಂಕ : 01–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ, ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ನಗರದ ಹೆಬ್ಬಾಳ ಬಡಾವಣೆಯಲ್ಲಿ ಸುಸಜ್ಜಿತ ಕನ್ವೆನ್ಷನ್‌ಹಾಲ್ ನಿರ್ಮಾಣ ಕಾಮಗಾರಿಗೆ ಅಂದಾಜು ಮೊತ್ತವಾದ ರೂ. 301.00 (ರೂಪಾಯಿ ಮೂರುನೂರಾ ಒಂದು ಲಕ್ಷಗಳು) ಲಕ್ಷಗಳ ವೆಚ್ಚದಲ್ಲಿ ನಿರ್ವಹಿಸಲು ಈ ಕೆಳಕಂಡ ಷರತ್ತುಗೊಳಪಟ್ಟಂತೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಈ ಕಾಮಗಾರಿಗಳನ್ನು ನಿರ್ವಹಿಸುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ ಹಾಗೂ ಅದರಡಿ ರಚಿಸಿರುವ ನಿಯಮಗಳಡಿಯಲ್ಲಿನ ಎಲ್ಲಾ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ, ಇ–ಟೆಂಡರ್ ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರ್ ಪ್ರಕ್ರಿಯೆ ನಡೆಸುವುದು.
2. ಕಾಮಗಾರಿಗಳ ಅಂದಾಜು ಮೊತ್ತದ ಪರಿಷ್ಕರಣೆಗೆ ಅವಕಾಶ ನೀಡತಕ್ಕದ್ದಲ್ಲ.
3. ಈ ಕಾಮಗಾರಿಗಳನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
4. ಟೆಂಡರ್ ಪ್ರಕ್ರಿಯೆ ಪ್ರಾರಂಭಿಸುವ ಮುನ್ನ ಟೆಂಡರ್ ಪರಿಶೀಲನೆ/ಮಂಜೂರಾತಿಯನ್ನು ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಪಡೆಯುವುದು.
5. ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರರವರು ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ ಮತ್ತು ನಿಯಮಗಳನ್ವಯ ಸರ್ಕಾರದ ಅನುಮೋದನೆ ಪಡೆದುಕೊಳ್ಳುವುದು.
6. ಈ ಯೋಜನೆಗೆ ಸಂಬಂಧಪಟ್ಟಂತೆ ಯೋಜನೆಗಳು ಜಾರಿ ಇರುವ ಪೂರ್ಣಾವಧಿಯಲ್ಲಿ ಗುಣಮಟ್ಟ ಹಾಗೂ ಪ್ರಮಾಣಗಳ ತಪಾಸಣೆಗಾಗಿ Third Party Consultants ಅನ್ನು ನೇಮಿಸಿಕೊಳ್ಳುವುದು.
7. ಯೋಜನೆಯಲ್ಲಿ ಯಾವುದೇ ಬದಲಾವಣೆ ಮಾಡಬೇಕಾದಲ್ಲಿ ಸರ್ಕಾರದ ಗಮನಕ್ಕೆ ತಮದು ಅಂತಹ ಬದಲಾವಣೆಗಳನ್ನು ನಿರ್ವಹಿಸುವ ಮುನ್ನ ಸರ್ಕಾರದ ಅನುಮೋದನೆ ಪಡೆದುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ : 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**P.R. 931**

## ಸಹಕಾರ ಸಚಿವಾಲಯ

**ವಿಷಯ** : ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಇ 54 ಅಂಆಸ(ಎ) 2014, ಬೆಂಗಳೂರು, ದಿನಾಂಕ : 05–05–2014 ಮತ್ತು 03–07–2014.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 14–10–2014.
3. ಸರ್ಕಾರದ ಆದೇಶ ಸಂಖ್ಯೆ : ಸಿಒ 212 ಸಿಎಲ್‌ಎಸ್ 2014, ದಿನಾಂಕ : 10–06–2014 ಮತ್ತು 28–08–2014.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/ಸಿಎಬಿ–1/10/2014–15, ದಿನಾಂಕ : 13–11–2014.

**ಪ್ರಸ್ತಾವನೆ :**

ಸಹಕಾರ ಇಲಾಖೆಯ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ 2014–15ನೇ ಸಾಲಿಗೆ ರೂ. 28796.35ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ (1)ರ ಸರ್ಕಾರದ ಆದೇಶಗಳಲ್ಲಿ ಸಹಕಾರ ಇಲಾಖೆಯ ಮುಂದುವರಿದ ಯೋಜನೆಗಳಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಈ ಯೋಜನೆಯಡಿ ರೂ. 7185.00 ಲಕ್ಷಗಳನ್ನು ಮೊದಲನೇ ತ್ರೈಮಾಸಿಕದಲ್ಲಿ ಮತ್ತು ರೂ. 7185.00 ಲಕ್ಷಗಳನ್ನು ಎರಡನೇ ತ್ರೈಮಾಸಿಕದಲ್ಲಿ ಅಂದರೆ ಒಟ್ಟು ರೂ. 14370.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ನಿಬಂಧಕರು ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯಿತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಸಹಾಯಧನ "2425–00–107–02–41–ಸಹಾಯಧನ (ಯೋಜನೆ) ಅಡಿ ಬಿಡುಗಡೆಗೆ ಬಾಕಿ ಇರುವ ಬಿಲ್ಲುಗಳ ಮೊತ್ತ ರೂ. 15099.78 ಲಕ್ಷಗಳ ಪೈಕಿ ಬಿಡುಗಡೆಗೆ ಲಭ್ಯವಿರುವ ಮೊತ್ತವನ್ನು ಮೂರನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಯೋಜನೆಯಲ್ಲಿ ಮೊದಲೆರಡು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಯಾಗಿರುವ ರೂ. 14,370.00 ಲಕ್ಷಗಳು ಸಂಪೂರ್ಣ ಬಳಕೆಯಾಗಿರುವುದಾಗಿ ಸಹಕಾರ ಸಂಘಗಳ ನಿಬಂಧಕರು ದೃಢೀಕೃತ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 212 ಸಿಎಲ್ಎಸ್ 2014, ಬೆಂಗಳೂರು, ದಿನಾಂಕ : 04–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯಿತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ರೂ. 7,184.00 ಲಕ್ಷಗಳನ್ನು (ಏಳು ಸಾವಿರದ ನೂರ ಎಂಬತ್ತೈದು ಲಕ್ಷ ರೂಪಾಯಿಗಳು ಮಾತ್ರ) 2014–15ನೇ ಸಾಲಿನ ಮೂರನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| | |
|---|---|
| ಲೆಕ್ಕಶೀರ್ಷಿಕೆ 2425–00–107–2–41 ಬೆಳೆ ಸಾಲಕ್ಕಾಗಿ ಸಹಾಯಧನ–106–ಸಾಮಾನ್ಯ | 6651.74 |
| ಲೆಕ್ಕಶೀರ್ಷಿಕೆ 2425–00–107–2–41 ಬೆಳೆ ಸಾಲಕ್ಕಾಗಿ ಸಹಾಯಧನ–422 ವಿಶೇಷ ಘಟಕ ಯೋಜನೆ | 333.29 |
| ಲೆಕ್ಕಶೀರ್ಷಿಕೆ 2425–00–107–2–41 ಸಾಲ ಮನ್ನಾ ಸಹಾಯಧನ 423 ಗಿರಿಜನ ಉಪಯೋಜನೆ | 199.97 |
| ಒಟ್ಟು | **7185.00** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ದಿನಾಂಕ : 14–10–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 932**

**SC-25**

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ/ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ–2012 ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಇ 54 ಅಂಆಸ (ಎ), 2014, ಬೆಂಗಳೂರು, ದಿನಾಂಕ : 05–05–2014 ಮತ್ತು 03–07–2014.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 05 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 14–10–2014.
3. ಸರ್ಕಾರದ ಆದೇಶ ಸಂಖ್ಯೆ : ಸಿಒ 101 ಸಿಎಲ್ಎಸ್ 2013, ದಿನಾಂಕ : 03–07–2014.
4. ಸರ್ಕಾರದ ತಿದ್ದೋಲೆ ಸಂಖ್ಯೆ : ಸಿಒ 246 ಸಿಎಲ್ಎಸ್ 2014, ದಿನಾಂಕ : 19–08–2014.
5. ಸರ್ಕಾರದ ಆದೇಶ ಸಂಖ್ಯೆ : ಸಿಒ 246 ಸಿಎಲ್ಎಸ್ 2014, ದಿನಾಂಕ : 19–09–2014.
6. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಸಿಆರ್‌ಡಿ/ಸಿಎಬಿ–1/10/2014–15, ದಿನಾಂಕ : 03–09–2014 ಮತ್ತು 11–11–2014.

**ಪ್ರಸ್ತಾವನೆ :**

ಸಾಲ ಮನ್ನಾ ಯೋಜನೆ–2012ರ ಯೋಜನೆ ಜಾರಿಗೊಳಿಸಲು 2014–15ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2425–00–107–2–46 ಸಾಲ ಮನ್ನಾ (ಯೋಜನೆ) ಯಡಿ ರೂ. 472.82 ಲಕ್ಷಗಳ ಒಟ್ಟು ಅವಕಾಶ ಕಲ್ಪಿಸಿದ್ದು ಅದರಲ್ಲಿ ಲೆಕ್ಕಶೀರ್ಷಿಕೆ 106–ಸಾಮಾನ್ಯ ರೂ. 434.77 ಲಕ್ಷ 422–ವಿಶೇಷ ಘಟಕ ಯೋಜನೆ ರೂ. 20.66 ಲಕ್ಷ ಮತ್ತು 423–ಗಿರಿಜನ ಉಪಯೋಜನೆ ರೂ. 17.39 ಲಕ್ಷ ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25 ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (3) ಮತ್ತು (4)ರ ಆದೇಶಗಳಲ್ಲಿ ಸಾಲ ಮನ್ನಾ ಯೋಜನೆ–2012ರಲ್ಲಿ 2014–15ನೇ ಸಾಲಿಗೆ ಒದಗಿಸಿದ ಆಯವ್ಯಯ ರೂ. 472.82 ಲಕ್ಷಗಳ ಪೈಕಿ ಮೊದಲನೇ ತ್ರೈಮಾಸಿಕದಲ್ಲಿ ರೂ. 118.20 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರ ಆದೇಶದಲ್ಲಿ ಎರಡನೇ ತ್ರೈಮಾಸಿಕದಲ್ಲಿ ರೂ. 118.20 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (6)ರ ಪ್ರಸ್ತಾವೆಗಳಲ್ಲಿ ಸಹಕಾರ ಸಂಘಗಳ ನಿಬಂಧಕರು 2013–14ನೇ ಸಾಲಿನಲ್ಲಿ ಬಾಕಿ ಇರುವ ಮೊತ್ತ ರೂ. 148.46 ಲಕ್ಷ ಮತ್ತು 2014–15ನೇ ಸಾಲಿನಲ್ಲಿ ಬಿಡುಗಡೆಗೆ ಬಾಕಿ ಇರುವ ಮೊತ್ತ ರೂ. 580.12 ಲಕ್ಷ ಒಟ್ಟಾರೆಯಾಗಿ ರೂ. 728.58 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಯೋಜನೆಯಲ್ಲಿ ಮೊದಲೆರಡು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಯಾಗಿರುವ ರೂ. 236.40 ಲಕ್ಷಗಳು ಸಂಪೂರ್ಣ ಬಳಕೆಯಾಗಿರುವುದಾಗಿ ಸಹಕಾರ ಸಂಘಗಳ ನಿಬಂಧಕರು ದೃಢೀಕೃತ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 246 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ : 04–12–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ/ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ–2012 ಯೋಜನೆಯಡಿ ರೂ. 118.20 ಲಕ್ಷ (ಒಂದು ನೂರ ಹದಿನೆಂಟು ಲಕ್ಷದ ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) 2014–15ನೇ ಸಾಲಿನ ಆಯವ್ಯಯದಲ್ಲಿ ಮೂರನೇ ತ್ರೈಮಾಸಿಕದಲ್ಲಿ ಬಿಡುಗಡೆಗೆ ಲಭ್ಯವಿರುವ ಅನುದಾನದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| | |
|---|---|
| ಲೆಕ್ಕಶೀರ್ಷಿಕೆ 2425–00–107–2–46 ಸಾಲ ಮನ್ನಾ ಸಹಾಯಧನ–106–ಸಾಮಾನ್ಯ | 108.69 |
| ಲೆಕ್ಕಶೀರ್ಷಿಕೆ 2425–00–107–2–46 ಸಾಲ ಮನ್ನಾ ಸಹಾಯಧನ–422 ವಿಶೇಷ ಘಟಕ ಯೋಜನೆ | 5.16 |
| ಲೆಕ್ಕಶೀರ್ಷಿಕೆ 2425–00–107–2–46 ಸಾಲ ಮನ್ನಾ ಸಹಾಯಧನ 423 ಗಿರಿಜನ ಉಪಯೋಜನೆ | 4.35 |
| **ಒಟ್ಟು** | **118.20** |

ಈ ವೆಚ್ಚವನ್ನು 2014–15ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2425–00–107–2–46–ಸಾಲ ಮನ್ನಾಸಹಾಯಧನ ಯೋಜನೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ದಿನಾಂಕ : 14–10–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 933**
**SC-25**

## ಒಳಾಡಳಿತ ಸಚಿವಾಲಯ

**ವಿಷಯ :** ಮಂಗಳೂರಿನ ಪೊಲೀಸ್ ಕಮೀಷನರೇಟ್ ಕಛೇರಿಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಾನೂನು ಅಧಿಕಾರಿ (ಕಿರಿಯ) ಇವರ ಕಛೇರಿಗೆ ಹೊಂದಿಕೊಂಡಂತೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಒಇ 40 ಪಿಪಿಇ 2012, ದಿನಾಂಕ : 03–07–2012.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್/ಸಿಶಾ1/237/2011–12, ದಿನಾಂಕ : 01–10–2012.
3. ಸರ್ಕಾರದ ಆದೇಶ ಸಂಖ್ಯೆ : ಒಇ 149 ಪಿಪಿಇ 2014, ದಿನಾಂಕ : 03–07–2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಮಂಗಳೂರಿನ ಪೊಲೀಸ್ ಕಮೀಷನರೇಟ್ ಕಛೇರಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಾನೂನು ಅಧಿಕಾರಿ (ಕಿರಿಯ) ಇವರ ಒಂದು ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಮಂಗಳೂರಿನ ಪೊಲೀಸ್ ಕಮೀಷನರೇಟ್ ಕಛೇರಿಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಾನೂನು ಅಧಿಕಾರಿ (ಕಿರಿಯ) ಇವರ ಕಛೇರಿಗೆ ಹೊಂದಿಕೊಂಡಂತೆ ಒಂದು ಶೀಘ್ರಲಿಪಿಗಾರ ಮತ್ತು ಒಂದು ದಲಾಯತ್ ಹುದ್ದೆಗಳನ್ನು ಸೃಜಿಸುವುದು ಅವಶ್ಯವಿದ್ದು, ಸೃಜಿಸುವಂತೆ ಸರ್ಕಾರದಲ್ಲಿ ವಿನಂತಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಮಂಗಳೂರಿನ ಪೊಲೀಸ್ ಕಮೀಷನರೇಟ್ ಕಛೇರಿಗೆ ಹೊಂದಿಕೊಂಡ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಾನೂನು ಅಧಿಕಾರಿ (ಕಿರಿಯ) ಇವರ ತಾತ್ಕಾಲಿಕ ಹುದ್ದೆಯ ಅವಧಿಯನ್ನು ದಿನಾಂಕ : 31–03–2015ರ ವರೆಗೆ ಮುಂದುವರೆಸಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 530 ಪಿಪಿಇ 2012, ಬೆಂಗಳೂರು, ದಿನಾಂಕ : 03ನೇ ಡಿಸೆಂಬರ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಗಳೂರಿನ ಪೊಲೀಸ್ ಕಮೀಷನರೇಟ್ ಕಛೇರಿಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಾನೂನು ಅಧಿಕಾರಿ (ಕಿರಿಯ) ರವರ ಕಛೇರಿಗೆ ಹೊಂದಿಕೊಂಡಂತೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಸೃಜಿಸಿರುವ ಹುದ್ದೆಗಳು | ನೇಮಕಾತಿ ವಿಧಾನ |
|---|---|---|---|
| 1. | ಶೀಘ್ರಲಿಪಿಗಾರರು | 01 | ಹೊರಗುತ್ತಿಗೆ |
| 2. | ದಲಾಯತ್ | 01 | ಹೊರಗುತ್ತಿಗೆ |
| | **ಒಟ್ಟು** | **02** | |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು 003–ಸಿಬ್ಬಂದಿ ವೇತನ" ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಎಫ್‌ಡಿ 514 ವೆಚ್ಚ–11/2014, ದಿನಾಂಕ : 03–11–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 934

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕುಶಾಲನಗರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ತಾತ್ಕಾಲಿಕ) ಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 483 ಮೈಅಪ್ರಾ 2006, ದಿನಾಂಕ : 18–02–2008.
2. ಸದಸ್ಯ ಕಾರ್ಯದರ್ಶಿಗಳು, ಕುಶಾಲನಗರ ಯೋಜನಾ ಪ್ರಾಧಿಕಾರ, ಕುಶಾಲನಗರ ಇವರ ಪತ್ರ ಸಂಖ್ಯೆ : ಕುಯೋಪ್ರಾ: ಸಕಾ: ಮಯೋತಾ: 2013–14/522, ದಿನಾಂಕ : 11–03–2014.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಇವರ ಏಕ ಕಡತ ಸಂಖ್ಯೆ : ನಗ್ರಾಯೋನಿ/ಉ.ನಿ (ಯೋವಿ)/ಮಯೋ/ಕುಶಾಲನಗರ/2014–15, ದಿನಾಂಕ :

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕುಶಾಲನಗರ ಪಟ್ಟಣಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯವನ್ನು ವಿಸ್ತರಿಸಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಪ್ರಾಧಿಕಾರವು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 9(1)ರನ್ವಯ ಕುಶಾಲನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ (ತಾತ್ಕಾಲಿಕ) ನ್ನು ಸಿದ್ದಪಡಿಸಿ ಸರ್ಕಾರದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ.

ಮೇಲೆ ಓದಲಾದ (3)ರ ಕುಶಾಲನಗರ ಪಟ್ಟಣದ ಜನಸಂಖ್ಯೆಯು 2001 ರಲ್ಲಿ 15,486 ಇದ್ದು 30 ವರ್ಷಗಳ ಯೋಜನಾ ಅವಧಿಗೆ ಅಂದರೆ 2031ನೇ ಇಸವಿಗೆ ಜನಸಂಖ್ಯೆಯು ಸುಮಾರು 32,000 ಆಗಬಹುದೆಂದು ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 1105 ಹೆಕ್ಟೇರ್ ವಿಸ್ತೀರ್ಣದಲ್ಲಿ 920.60 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ 1961ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 1105 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 479.79 ಹೆಕ್ಟೇರ್ (ಶೇ. 52.12), ವಾಣಿಜ್ಯಕ್ಕಾಗಿ 50.75 ಹೆಕ್ಟೇರ್ (ಶೇ.5.51), ಕೈಗಾರಿಕೆಗಾಗಿ 99.84 ಹೆಕ್ಟೇರ್ (ಶೇ. 10.85), ಸಾರ್ವಜನಿಕ : ಅರೆ ಸಾರ್ವಜನಿಕ ಉಪಯೋಗಕ್ಕೆ 52.14 ಹೆಕ್ಟೇರ್ (ಶೇ. 5.66) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 108.52 ಹೆಕ್ಟೇರ್ (ಶೇ. 11.79) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 125.84 ಹೆಕ್ಟೇರ್ (ಶೇ.13.67), ನಾಗರೀಕ ಸೌಲಭ್ಯಕ್ಕಾಗಿ 3.72 ಹೆಕ್ಟೇರ್ (ಶೇ. 0.40) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 469 ಮೈಅಪ್ರಾ 2014, ಬೆಂಗಳೂರು, ದಿನಾಂಕ : 03-12-2014.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕುಶಾಲನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 935**

**SC-150**

## ಸಹಕಾರ ಸಚಿವಾಲಯ

**ವಿಷಯ :** ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ಹಣ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಇ 54 ಅಂಆಸ (ಎ), 2014, ಬೆಂಗಳೂರು, ದಿನಾಂಕ : 05-05-2014 ಮತ್ತು 03-07-2014.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 05 ಟಿಎಫ್‌ಪಿ 2014, ಬೆಂಗಳೂರು, ದಿನಾಂಕ : 14-10-2014.
3. ಸರ್ಕಾರದ ಆದೇಶ ಸಂಖ್ಯೆ : ಸಿಓ 213 ಸಿಎಲ್‌ಎಸ್ 2014, ದಿನಾಂಕ : 10-06-2014 ಮತ್ತು 04-09-2014.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/ಕೆಎಂಈ-8/05/2014-15, ದಿನಾಂಕ : 11-11-2014.

**ಪ್ರಸ್ತಾವನೆ :**

ಸಹಕಾರ ಇಲಾಖೆಯ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ 2014-15ನೇ ಸಾಲಿಗೆ ರೂ. 2000.00 ಲಕ್ಷಗಳ ಆಯವ್ಯಯದ ಅವಕಾಶ ಕಲ್ಪಿಸಿದೆ.

ಮೇಲೆ ಓದಲಾದ (1)ರ ಸರ್ಕಾರದ ಆದೇಶಗಳಲ್ಲಿ ಸಹಕಾರ ಇಲಾಖೆಯ ಮುಂದುವರಿದ ಯೋಜನೆಗಳಲ್ಲಿ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 25 ರಷ್ಟನ್ನು ಮೂರನೇ ಕಂತಿನಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶಗಳಲ್ಲಿ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ರೂ. 500.00 ಲಕ್ಷಗಳನ್ನು ಮೊದಲನೇ ತ್ರೈಮಾಸಿಕದಲ್ಲಿ ಮತ್ತು ರೂ. 500.00 ಲಕ್ಷಗಳನ್ನು ಎರಡನೇ ತ್ರೈಮಾಸಿಕದಲ್ಲಿ ಅಂದರೆ ಒಟ್ಟು ರೂ. 1000.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4)ರ ಪ್ರಸ್ತಾವದಲ್ಲಿ ಸಹಕಾರ ಸಂಘಗಳ ನಿಬಂಧಕರು ರಾಜ್ಯದ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಸ್ವಸಹಾಯ ಗುಂಪುಗಳಿಗೆ ನೀಡುವ ಸಾಲದ ಮೇಲಿನ ಬಡ್ಡಿ ಸಹಾಯಧನ ನೀಡುವ ಯೋಜನೆಯಡಿ ಬಿಡುಗಡೆಗೆ ಬಾಕಿ ಇರುವ ಬಿಲ್ಲುಗಳ ಮೊತ್ತ ರೂ. 2728.98 ಲಕ್ಷಗಳ ಪೈಕಿ ಬಿಡುಗಡೆಗೆ ಲಭ್ಯವಿರುವ ಮೊತ್ತವನ್ನು ಮೂರನೇ ತ್ರೈಮಾಸಿಕದಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ. ಈ ಯೋಜನೆಯಲ್ಲಿ ಮೊದಲೆರಡು ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಯಾಗಿರುವ ರೂ. 1000.00 ಲಕ್ಷಗಳು ಪೂರ್ಣ ಬಳಕೆಯಾಗಿರುವುದಾಗಿ ಸಹಕಾರ ಸಂಘಗಳ ನಿಬಂಧಕರು ದೃಢೀಕೃತ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಓ 213 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ : 04-12-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸ್ವಸಹಾಯ ಗುಂಪುಗಳ ಸಾಲಗಳ ಮೇಲಿನ ಬಡ್ಡಿ ಸಹಾಯಧನ ಯೋಜನೆಯಲ್ಲಿ ರೂ. 500.00 ಲಕ್ಷಗಳನ್ನು (ಐದು ನೂರು ಲಕ್ಷ ರೂಪಾಯಿಗಳು ಮಾತ್ರ) 2014-15ನೇ ಸಾಲಿನ ಮೂರನೇ ತ್ರೈಮಾಸಿಕದಲ್ಲಿ ಕೆಳಕಂಡ ಬಿಡುಗಡೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| | |
|---|---|
| ಲೆಕ್ಕಶೀರ್ಷಿಕೆ 2425-00-107-2-41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ-106-ಸಾಮಾನ್ಯ | 463.00 |
| ಲೆಕ್ಕಶೀರ್ಷಿಕೆ 2425-00-107-2-41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ-422 ವಿಶೇಷ ಘಟಕ ಯೋಜನೆ | 23.12 |
| ಲೆಕ್ಕಶೀರ್ಷಿಕೆ 2425-00-107-2-41 ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ 423 ಗಿರಿಜನ ಉಪಯೋಜನೆ | 13.88 |
| **ಒಟ್ಟು** | **500.00** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು

ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 5 ಟಿಎಫ್‌ಪಿ 2014, ದಿನಾಂಕ : 14–10–2014ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 936**
**SC-25**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೆಳಗಾವಿ ಸುವರ್ಣಸೌಧ ಕಟ್ಟಡ ಕಾಮಗಾರಿಯಲ್ಲಿ ನಡೆದಿರುವ ಅವ್ಯವಹಾರದ ಕುರಿತು ತನಿಖೆ ನಡೆಸಲು ದಿನಾಂಕ : 13–09–2013 ರಂದು ರಚಿಸಲಾದ ಸಮಿತಿಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಭೀಮಪ್ಪ ಗುಂಡಪ್ಪ ಗಡಾದ ಸಮಾಜ ಸೇವಕರು, ಮೂಡಲಗಿ ತಾ: ಜಿಲ್ಲೆ ಬೆಳಗಾವಿ ಇವರ ಪತ್ರ ದಿನಾಂಕ : 25–07–2013.
2. ಮಾನ್ಯ ಲೋಕೋಪಯೋಗಿ ಸಚಿವರ ಟಿಪ್ಪಣಿ ದಿನಾಂಕ : 22–08–2014.
3. ಸರ್ಕಾರದ ಆದೇಶ ಸಂಖ್ಯೆ : ಲೋಇ 247 ಬಿಎಂಎಸ್ 2013, ದಿನಾಂಕ : 13–09–2013.
4. ಸರ್ಕಾರದ ಆದೇಶ ಸಂಖ್ಯೆ : ಲೋಇ 131 ಬಿಎಂಎಸ್ 2013, ದಿನಾಂಕ : 16–09–2014.
5. ಅಧೀಕ್ಷಕ ಅಭಿಯಂತರರು (ವಿನ್ಯಾಸ) ಮು.ಇಂ. ರವರ ಕಛೇರಿ ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ಭೀಮಪ್ಪ ಗುಂಡಪ್ಪ ಗಡಾದ ಇವರು ಬೆಳಗಾವಿ ಸುವರ್ಣಸೌಧ ಕಟ್ಟಡ ನಿರ್ಮಾಣದ ಕಾಮಗಾರಿಯಲ್ಲಿ ಸಾರ್ವಜನಿಕರ ಹಣದಲ್ಲಿ ಅವ್ಯವಹಾರ ನಡೆದಿದ್ದು, ಸಾಕಷ್ಟು ಪ್ರಮಾಣದಲ್ಲಿ ಅನಾವಶ್ಯಕ ದುಂದುವೆಚ್ಚ ಕೂಡ ಮಾಡಲಾಗಿದೆಯೆಂದು, ಆದ್ದರಿಂದ ಸುವರ್ಣಸೌಧದ ಕಾಮಗಾರಿಗೆ ಸಂಬಂಧಿಸಿದಂತೆ ಹೊರಡಿಸಿರುವ ದಾಖಲೆಗಳನ್ನು ಪರಿಶೀಲಿಸಿ, ಉನ್ನತ ಮಟ್ಟದ ತನಿಖೆ ನಡೆಸಿ ಸತ್ಯಾಂಶವನ್ನು ಸಾರ್ವಜನಿಕರಿಗೆ ಪ್ರಚುರ ಪಡಿಸುವಂತೆ ಕೋರಿರುತ್ತಾರೆ.

ಓದಲಾದ (2)ರ ಟಿಪ್ಪಣಿಯಲ್ಲಿ ಮಾನ್ಯ ಲೋಕೋಪಯೋಗಿ ಸಚಿವರು ಶ್ರೀ ಭೀಮಪ್ಪ ಗುಂಡಪ್ಪ ಗಡಾದ, ಸಮಾಜ ಸೇವಕರು, ಮೂಡಲಗಿ ತಾ: ಜಿಲ್ಲೆ ಬೆಳಗಾವಿ ಇವರ ಪತ್ರದಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಅಗತ್ಯಕ್ರಮ ಕೈಗೊಳ್ಳುವಂತೆ ಸೂಚಿಸಿರುವ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಬಗ್ಗೆ ತನಿಖೆ ನಡೆಸಿ ವರದಿ ನೀಡಲು ಓದಲಾದ ಉಲ್ಲೇಖ (3)ರ ಆದೇಶದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು.

ಬೆಳಗಾವಿಯ ಸುವರ್ಣಸೌಧ ಕಟ್ಟಡ ಕಾಮಗಾರಿಯ ಪರಿಷ್ಕೃತ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಸಂಬಂಧ ಸಚಿವ ಸಂಪುಟದ ಅನುಮೋದನೆಗಾಗಿ ಮಂಡಿಸಲಾಗಿ ಸಚಿವ ಸಂಪುಟವು ಈ ಕಾಮಗಾರಿಯ ಕುರಿತು ಈ ಹಿಂದೆ ಮಾಡಲಾಗಿದ್ದ ಪರಿಷ್ಕೃತ ಅಂದಾಜುಗಳು ಹಾಗೂ ಪ್ರಸ್ತುತ ಮರು ಪರಿಷ್ಕೃತ ಅಂದಾಜಿನಲ್ಲಿ ಗಣನೀಯ ಹೆಚ್ಚಳ ಕಂಡು ಬಂದಿರುವ ಹಿನ್ನೆಲೆಯಲ್ಲಿ ತನಿಖೆ ಮಾಡಿ ವರದಿ ನೀಡಲು ಶ್ರೀ ಜಿ.ವಿ. ಕೃಷ್ಣರಾವ್, ನಿವೃತ್ತ, ಐ.ಎಸ್.ಎಸ್. ಅಧಿಕಾರಿ ಇವರಿಗೆ ವಹಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಅದರಂತೆ ಓದಲಾದ (4)ರ ಆದೇಶದಲ್ಲಿ ಸದರಿಯವರನ್ನು ತನಿಖಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಓದಲಾದ (5) ಪತ್ರದಲ್ಲಿ ಅಧೀಕ್ಷಕ ಅಭಿಯಂತರರು (ವಿನ್ಯಾಸ) ಮು.ಇಂ. ರವರ ಕಛೇರಿ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರು ಸುವರ್ಣಸೌಧ ಕಟ್ಟಡ ನಿರ್ಮಾಣದ ಕಾಮಗಾರಿಯಲ್ಲಿ ನಡೆದಿರುವ ಅವ್ಯವಹಾರದ ಬಗ್ಗೆ ಶ್ರೀ ಜಿ.ವಿ. ಕೃಷ್ಣರಾವ್ ನಿವೃತ್ತ, ಐ.ಎಸ್.ಎಸ್. ಅಧಿಕಾರಿ ಇವರನ್ನು ತನಿಖಾಧಿಕಾರಿಯಾಗಿ ನೇಮಿಸಲಾಗಿರುವುದರಿಂದ ಹಾಗೂ ಈ ಸಮಿತಿಯು ಉನ್ನತ ಮಟ್ಟದಾಗಿರುವುದರಿಂದ ಸರ್ಕಾರದ ಆದೇಶ ಸಂಖ್ಯೆ: ಲೋಇ 247 ಬಿಎಂಎಸ್ 2013, ದಿನಾಂಕ : 13–09–2013ರಲ್ಲಿ ತನಿಖಾಧಿಕಾರಿಯನ್ನಾಗಿ ಕಾರ್ಯನಿರ್ವಹಿಸಲು ತಮ್ಮನ್ನು ಹಾಗೂ ಇತರೆ ಸದಸ್ಯರುಗಳನ್ನು ನೇಮಿಸಿರುವ ಸಮಿತಿಯ ಆದೇಶವನ್ನು ಹಿಂಪಡೆಯುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಅವ್ಯವಹಾರದ ಬಗ್ಗೆ ಶ್ರೀ ಜಿ.ವಿ. ಕೃಷ್ಣರಾವ್, ನಿವೃತ್ತ ಐ.ಎಸ್.ಎಸ್. ಅಧಿಕಾರಿ ಇವರನ್ನು ತನಿಖಾಧಿಕಾರಿಯಾಗಿ ನೇಮಿಸಿರುವ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 247 ಬಿಎಂಎಸ್ 2014, ಬೆಂಗಳೂರು, ದಿನಾಂಕ : 01ನೇ ಡಿಸೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿಯ ಸುವರ್ಣಸೌಧ ಕಟ್ಟಡ ಕಾಮಗಾರಿಯಲ್ಲಿ ನಡೆದಿರುವ ಅವ್ಯವಹಾರದ ಕುರಿತು ತನಿಖೆ ನಡೆಸಲು ಶ್ರೀ ಮೋಹನ್, ಅಧೀಕ್ಷಕ ಇಂಜಿನಿಯರ್ (ವಿನ್ಯಾಸ), ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ),

ಬೆಂಗಳೂರು ಇವರ ನೇತೃತ್ವದಲ್ಲಿ ಸಮಿತಿಯನ್ನು ರಚಿಸಿ ಹೊರಡಿಸಲಾದ ದಿನಾಂಕ : 13–09–2014ರ ಆದೇಶ ಸಂಖ್ಯೆ : ಲೋಇ 247 ಬಿಎಂಎಸ್ 2014ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ. ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
(ಕಟ್ಟಡಗಳು).

**PR. 937**

## ಒಳಾಡಳಿತ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಹೆಚ್‌ಡಿ 513 ಎಸ್‌ಎಸ್‌ಟಿ 2014, ಬೆಂಗಳೂರು, ದಿನಾಂಕ : 29–11–2014.**

**ವಿಷಯ :** ರಾಜ್ಯದಲ್ಲಿರುವ ವಕ್ಫ್ ಆಸ್ತಿಗಳ ಸಂರಕ್ಷಣೆ ಹಾಗೂ ಕಾನೂನು ಬಾಹಿರವಾಗಿ ಪರಭಾರೆ ಇತ್ಯಾದಿ ಮಾಡಲಾಗಿರುವ ಕುರಿತು ಸಲ್ಲಿಸಲಾಗಿರುವ ದೂರುಗಳ ಬಗ್ಗೆ ಮೊಕದ್ದಮೆ ದಾಖಲಿಸಿ ತ್ವರಿತ ವಿಲೇವಾರಿಯ ಬಗ್ಗೆ.

**ಓದಲಾಗಿದೆ :** ದಿನಾಂಕ : 22–09–2014ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

ಕರ್ನಾಟಕ ರಾಜ್ಯದಲ್ಲಿರುವ ವಕ್ಫ್ ಆಸ್ತಿಗಳು ವಿಶೇಷವಾಗಿ ನಗರ ಪ್ರದೇಶಗಳಲ್ಲಿರುವ ಆಸ್ತಿಗಳ ಬೆಲೆ ಜಾಸ್ತಿಯಾಗಿರುವ ಹಿನ್ನೆಲೆಯಲ್ಲಿ ಅನಧಿಕೃತವಾಗಿ ಹಾಗೂ ಕಾನೂನು ಬಾಹಿರವಾಗಿ ದಾಖಲಾತಿಗಳನ್ನು ಸೃಷ್ಟಿಸಿ ಪರಭಾರೆ ಆಗುತ್ತಿರುವ ಪ್ರಕರಣಗಳನ್ನು ಗಮನಿಸಿ ಈ ಪ್ರವೃತ್ತಿಯನ್ನು ತಡೆಯಲು 2013ನೇ ಸಾಲಿನಲ್ಲಿ ತಿದ್ದುಪಡಿ ಮಾಡಲಾಗಿರುವ ವಕ್ಫ್ ಕಾಯ್ದೆಯ ಅನುಸಾರ ಕಟ್ಟುನಿಟ್ಟಿನ ಕ್ರಮ ಜರುಗಿಸಲು ವಕ್ಫ್ ಮಂಡಳಿ ಪ್ರಸ್ತಾಪಿಸಲಾದ ಹಿನ್ನೆಲೆಯಲ್ಲಿ ಮಾನ್ಯ ಗೃಹ ಸಚಿವರು ಉಲ್ಲೇಖಿಸಲಾಗಿರುವ ದಿನಾಂಕದ ಸಭೆಯಲ್ಲಿ ಗೃಹ ಇಲಾಖೆಯ ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲು ಸೂಚಿಸಿರುತ್ತಾರೆ.

ವಕ್ಫ್ ತಿದ್ದುಪಡಿ ಕಾಯ್ದೆ 2013ರ ಕಲಂ 51(1) ಈ ಕೆಳಕಂಡಂತಿದೆ.

Notwithstanding any thing contained in the Wakf deed, any lease of any immovable property which is Wakf property, shall be void unless such lease is effected with the prior sanction of the Board. Provided that no mosque, dargah, khanqah, Graveyard, or imam Bara shall be leased.

(1-A) Any sale, gift, exchange, mortgage or transfer or Wakf property shall be void ab initio.

"56-Restriction on power to grant lease of wakf property".- ಕಲಂನ ಉದ್ಧೃತ ಭಾಗ ಈ ಕೆಳಕಂಡಂತಿರುತ್ತದೆ.

Provided further that the lease of any immovable Wakf property which is an agriculture land, for a period exceeding 3 years's shall, not with standing anything contained in the deed or instrument of Wakf or in any other law for the time being in force be void and of no effect.

ಮೇಲಿನ ಪ್ರಾವಧಾನಗಳಲ್ಲಿ ಕಾನೂನು ಬಾಹಿರೆಂದು ಪರಿಗಣಿಸಲಾಗಿರುವ ಕೃತ್ಯಗಳು ಜರುಗಿದಲ್ಲಿ ವಕ್ಫ್ ತಿದ್ದುಪಡಿ ಕಾಯ್ದೆ 2013ರ ಕಲಂ 52(ಎ) ಪ್ರಕಾರ ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಕಲಂ 52(ಎ) ಈ ಕೆಳಕಂಡಂತಿರುತ್ತದೆ.

"52-A Penalty for alienation of Wakf property without sanction of Board-(1) Whoever alienates or purchase or takes possession of, in any manner whatsoever, either permanently or temporarily, any movable or immovable property being a Wakf property, without prior sanction of the Board, shall be punishable with rigorous imprisonment for a term which any extend to two years.

Provided that the Wakf property so alienated shall without prejudice to the provisions of any law for the time being in force, be vested in the Board without any compensation there for.

(2) Notwithstanding anything contained in the Code of Criminal Procedure, 1973 (2 of 1974) any offence punishable under this secion shall be cognizable and non-bailable.

(3) No Court shall take congnizance of any offence under this section except on complaint made by the Board or any officer duly authorized by the State Government in this behalf.

(4) No Court inferior to that of a Metropolitan Magistrate or a Judicial Magistrate of the first class shall try any offence punishable under this section.

ವಕ್ಫ್ ತಿದ್ದುಪಡಿ ಕಾಯಿದೆ 2013ರ ಅನ್ವಯ ಕಲಂ 108(ಎ) ಸೇರಿಸಲಾಗಿದ್ದು ಈ ಕೆಳಕಂಡಂತಿದೆ.

**"108-A Act to have overriding effect :-** The provisions of this Act shall have overriding effect notwithstanding anything inconsistent therewith contained in any other law for the time being in force or in any instrument having effect by virtue of any law other than this Act".

ಈ ಆಸ್ತಿಗಳನ್ನು ಸಂರಕ್ಷಿಸಲು ಮೇಲೆ ವಿವರಿಸಲಾಗಿರುವಂತೆ ಕಟ್ಟುನಿಟ್ಟಿನ ಪ್ರಾವದಾನಗಳನ್ನು ಅಳವಡಿಸಲಾಗಿತ್ತದೆ. Land Grabbers Act 2014 ಸಹ Wakf ಆಸ್ತಿ ರಕ್ಷಣೆಗೆ ಅನ್ವಯಿಸಲಾಗಿರುತ್ತದೆ. ಈ ನಿಯಮಗಳನ್ನು ಚಾಚು ತಪ್ಪದೇ ಅನುಷ್ಠಾನಗೊಳಿಸುವುದು ಅವಶ್ಯಕವಾಗಿರುವುದರಿಂದ ವಕ್ಫ್

ಮಂಡಳಿಯ ಮುಖ್ಯಕಾರ್ಯ ನಿರ್ವಹಣಾಧಿಕಾರಿ ಅಥವಾ ಸರ್ಕಾರದಿಂದ ಅಧಿಕೃತಗೊಳಿಸಲಾಗಿರುವ ಸಂಸ್ಥೆ ಹಾಗೂ ಅಧಿಕಾರಿಗಳು ಈ ಸಂಬಂಧ ಮೊಕದ್ದಮೆಗಳನ್ನು ದಾಖಲಿಸಿದ್ದಲ್ಲಿ ತಕ್ಷಣವೇ ಸೂಕ್ತ ದಾಖಲಾತಿಗಳೊಂದಿಗೆ ದೂರುಗಳನ್ನು ಸ್ವೀಕರಿಸಿ ಮೊಕದ್ದಮೆ ದಾಖಲಿಸಿ ಎಫ್.ಐ.ಆರ್. ದಾಖಲೆಗಳು ಒದಗಿಸಲು ನಿಯಮಾನುಸಾರ ಅಗತ್ಯಕ್ರಮ ಕೈಗೊಳ್ಳಲು ಸೂಚಿಸಲಾಗಿದೆ.

ಈ ಕಾರ್ಯದಲ್ಲಿ ಯಾವುದೇ ವಿಳಂಬ ಹಾಗೂ ನಿರ್ಲಕ್ಷತೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸುತ್ತದೆ ಹಾಗೂ ಅಂತಹ ಅಧಿಕಾರಿಗಳ ವಿರುದ್ಧ ಇಲಾಖೆಯ ನಿಯಮಗಳ ಅನುಸಾರ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕೆಂದು ಇಲಾಖೆಯ ಸಕ್ಷಮ ಪ್ರಾಧಿಕಾರಿಗಳಿಗೆ ಸೂಚಿಸಲಾಗಿದೆ.

P.R. 938 **ಗೋವಿಂದಸ್ವಾಮಿ**

SC-200 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ).

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರು, ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಅಬಕಾರಿ ಆಯುಕ್ತರ ಆದೇಶ ಸಂ. ಇಸಿಇ 16 ಡಿಎಸ್‌ಸಿ (1) 2003, ದಿನಾಂಕ : 20–07–2006.
2. ಎ. ಕೃಷ್ಣಪ್ಪ, ನಿವೃತ್ತ ನ್ಯಾಯಾಧೀಶರು ದಿನಾಂಕ : 04–05–2007ರಂದು ಸಲ್ಲಿಸಿದ ವಿಚಾರಣಾ ವರದಿ.
3. ಎರಡನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಇಸಿಇ/16/ಡಿಎಸ್‌ಸಿ (1)/ 2003, ದಿನಾಂಕ : 01–08–2002.
4. ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರು, ಇವರ ಉತ್ತರ ದಿನಾಂಕ : 05–10–2007.
5. ಸರ್ಕಾರದ ಪತ್ರ ಸಂ. ಎಫ್‌ಡಿ 167 ಇಪಿಎಸ್ 2008, ದಿನಾಂಕ : 05–10–2010.
6. ಕಾರ್ಯದರ್ಶಿ, ಲೋಕಸೇವಾ ಆಯೋಗ ಇವರ ಪತ್ರ ಸಂ. ಪಿಎಸ್‌ಸಿ /199/ಸಿಎನ್‌ಎಸ್/09, ದಿನಾಂಕ : 16–12–2013.

**ಪ್ರಸ್ತಾವನೆ :**

ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರು ಈ ಹಿಂದೆ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ವಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಕಾಲಿಕವಾಗಿ ಮದ್ಯ ಮಾರಾಟ ಮಳಿಗೆಗಳ ಲೆಕ್ಕ ಪತ್ರ ಪರಿಶೀಲನೆ ಹಾಗೂ ತಪಾಸಣೆ ಕೈಗೊಳ್ಳದೇ ಶ್ರೀ ರಾಮರೆಡ್ಡಿ ಎಂಬ ಸಿಎಲ್–1 ಸನ್ನದುದಾರರು ಬೋಗಸ್ ಇನ್‌ವಾಯ್ಸ್‌ಗಳನ್ನು ಸೃಷ್ಟಿಸಿ ಅಕ್ರಮ ವಹಿವಾಟು ನಡೆಸಲು ಅವಕಾಶ ಮಾಡಿಕೊಟ್ಟು ಸರ್ಕಾರಕ್ಕೆ 1,19,30,235.62 ಲಕ್ಷ ನಷ್ಟ ಉಂಟಾಗಲು ಕಾರಣರಾದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ : 20–07–2014ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಎ. ಕೃಷ್ಣಪ್ಪ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2) ರಲ್ಲಿ ಓದಲಾದ ದಿನಾಂಕ : 04–05–2007ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಕೆಳಕಂಡ ನಿರ್ಣಯ ನೀಡಿದರು :–

ಸಗಟು ಮಾರಾಟ ಮಳಿಗೆಯ ಸರಕುಗಳ ವಿವರವನ್ನು ಪಡೆದು ಸನ್ನದುದಾರರಿಗೆ ಸಂಬಂಧಿಸಿದ ಕಛೇರಿ ದಾಖಲೆಗಳ ತಪಾಸಣೆ ನಡೆಸಿ ಮದ್ಯವಹಿವಾಟಿನ ಬಗ್ಗೆ ವಿವರವಾದ ತನಿಖೆ ನಡೆಸಿ ಸಗಟು ವರ್ತಕರ ವಿರುದ್ಧ ಎಫ್.ಐ.ಆರ್. ದಾಖಲಿಸಿದ ಅಂದಿನ ಕೋಲಾರ ಜಿಲ್ಲಾ ಅಬಕಾರಿ ಅಧೀಕ್ಷಕರಾದ ಎರಡನೇ ಸಾಕ್ಷಿಯು ನೀಡಿದ ಹೇಳಿಕೆಯಂತೆ ಅವರು 18–06–2003, 19–06–2003 ರಂದು ತಪಾಸಣೆ ನಡೆಸಿದ ಸಂದರ್ಭದಲ್ಲಿ ಅಕ್ಟೋಬರ್ 2002 ರಿಂದ 2003 ವರೆಗಿನ ವಹಿವಾಟನ್ನು ಪರಿಶೀಲಿಸಿದ್ದು ಸನ್ನದುದಾರರು ಅಬಕಾರಿ ನಿರೀಕ್ಷಕರಿಂದ ನೀಡಲ್ಪಟ್ಟ ರಹದಾರಿಯ ಪ್ರಮಾಣಕ್ಕಿಂತ ತೀರ ಹೆಚ್ಚಿನ ವಹಿವಾಟು ನಡೆಸಿರುವುದು ಪತ್ತೆಯಾಗಿದ್ದು, ಇದಕ್ಕಾಗಿ ಸನ್ನದುದಾರರು, ಲೆಕ್ಕಿಗರು, ಅಕೌಂಟೆಂಟ್, ಸ್ಟೋರ್ ಕೀಪರ್ ಹಾಗೂ ಮಳಿಗೆ ಮಾಲೀಕರುಗಳ ವಿರುದ್ಧ ಮೊಕದ್ದಮೆ ಹೂಡಿದ್ದಾಗಿ ತಿಳಿಸಿದ್ದಾರೆ. ಆರೋಪಿಯು ಮಳಿಗೆಯನ್ನು ಸರಿಯಾಗಿ ತ್ರೈಮಾಸಿಕ ತಪಾಸಣೆ ನಡೆಸಿದ್ದಲ್ಲಿ ಹಾಗೂ ಆಗಲೇ ಲೋಪಗಳನ್ನು ಕಂಡು ಹಿಡಿದಿದ್ದಲ್ಲಿ ಇಷ್ಟೊಂದು ನಷ್ಟ ಉಂಟಾಗುತ್ತಿರಲಿಲ್ಲ ಎಂದಿದ್ದಾರೆ. ತ್ರೈಮಾಸಿಕ ತಪಾಸಣೆ ನಡೆಸಿ ಲೆಕ್ಕಪುಸ್ತಕಗಳಲ್ಲಿ ವಿವರ ನಮೂದಿಸಿದ್ದೇನೆ ಎಂಬ ಆರೋಪಿಯ ಹೇಳಿಕೆ ಸರಿಯಿಲ್ಲ. ಆರೋಪಿತರು ತಪಾಸಣೆ ಮಾಡಿರುವುದಕ್ಕೆ ಯಾವುದೇ ದಾಖಲೆಗಳು ಕಂಡುಬರಲಿಲ್ಲ. ಈ ಕುರಿತು ಆಯುಕ್ತರ ಕಛೇರಿ ಸುತ್ತೋಲೆಯನ್ನು ಪಾಲಿಸಿಲ್ಲ ಎಂದು ಸಾಕ್ಷ್ಯ ನುಡಿದಿದ್ದಾರೆ.

ಅಬಕಾರಿ ಅಧೀಕ್ಷಕರು, ಕೋಲಾರ ಜಿಲ್ಲೆಯ ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ ವರದಿಯನ್ನು ಪರಿಶೀಲಿಸಲಾಗಿ ಜಿಲ್ಲಾ ಕಛೇರಿಯಿಂದ ಸನ್ನದುದಾರರಿಗೆ ನೀಡಲ್ಪಟ್ಟ ರಹದಾರಿಗಳಲ್ಲಿ ನಮೂದಿಸಿದ ಮದ್ಯದ ಪ್ರಮಾಣಕ್ಕೂ ಸನ್ನದುದಾರರ ಮಳಿಗೆಯಿಂದ ಸರಬರಾಜು ಆದ ಮದ್ಯದ ಪ್ರಮಾಣಕ್ಕೂ ಏರುಗತಿಯ ತೀವ್ರ ವ್ಯತ್ಯಾಸವು ಈ ಅವಧಿಯಲ್ಲಿ ಕಂಡುಬಂದಿದೆ. ಅಲ್ಲದೇ ಸನ್ನದುದಾರರು ನಕಲಿ ಇನ್‌ವಾಯ್ಸ್‌ಗಳನ್ನು ಸೃಷ್ಟಿಸಿ ಮಾರಾಟ ಮಾಡಿರುವುದು ಮೂಡಿ ಬಂದಿದೆ. ಅಂದು ಅಬಕಾರಿ ನಿರೀಕ್ಷಕರಾಗಿದ್ದ ಆರೋಪಿಯು ಕಾಲಕಾಲಕ್ಕೆ ತಪಾಸಣೆ ಕೈಗೊಂಡು ಆಗಲೇ ಅಕ್ರಮಗಳನ್ನು ಪತ್ತೆಹಚ್ಚಿ ಸಕಾಲಿಕವಾಗಿ ಸನ್ನದುದಾರರ ವಿರುದ್ಧ ದಂಡನಾ ಕ್ರಮಗಳನ್ನು ಕೈಗೊಂಡಿರುವುದು ಕಂಡುಬಂದಿರುವುದಿಲ್ಲ. ಈ ಬಗ್ಗೆ ದಾಖಲೆಗಳಲ್ಲಿ ಯಾವ ಆಧಾರವೂ ಇಲ್ಲ. ಆದಾಗ್ಯೂ, ಆರೋಪಿಯು ತನ್ನ ರಕ್ಷಣಾ ಹೇಳಿಕೆಯಲ್ಲಿ ತಾನು ದಿನಾಂಕ : 22–07–1994 ಮತ್ತು 15–10–1996ರ ಸುತ್ತೋಲೆಯನ್ವಯ ಪ್ರಶ್ನಿತ ಸನ್ನದುದಾರರ ಮಳಿಗೆಯ ತ್ರೈಮಾಸಿಕ ತಪಾಸಣೆ ನಡೆಸಿದ್ದು ಸನ್ನದುದಾರರಿಂದ ಯಾವುದೇ ಅಕ್ರಮ ವ್ಯವಹಾರ, ಬೋಗಸ್ ಇನ್‌ವಾಯ್ಸ್‌ಗಳ ಸೃಷ್ಟಿಯಂತಹಾ ಅಪರಾಧಗಳು ಕಂಡುಬಂದಿರುವುದಿಲ್ಲ. ಹಾಗೇನಾದರೂ ಕಂಡು ಬಂದಿದ್ದಲ್ಲಿ ಅವರುಗಳ ವಿರುದ್ಧ ಕ್ರಮ ಜರುಗಿಸಿ ಮೇಲಾಧಿಕಾರಿಗಳಿಗೆ ವರದಿ ನೀಡುತ್ತಿದ್ದೆನು ಎಂದು ತಿಳಿಸಿದ್ದಾರೆ.

ಆದರೆ, ವಿಚಾರಣೆಯಲ್ಲಿ ಸಾಕ್ಷಿಯ ಹೇಳಿಕೆ ದಾಖಲೆಗಳ ಪರಿಶೀಲನೆಯಿಂದಾಗಿ ಆರೋಪಿತರು ತ್ರೈಮಾಸಿಕ ತಪಾಸಣೆ ನಡೆಸದೇ ಇರುವುದು. ಅಬಕಾರಿ ಅಧೀಕ್ಷಕರೇ ಅಕ್ರಮ ಮದ್ಯ ವಹಿವಾಟನ್ನು ಪತ್ತೆಹಚ್ಚಿ ಕೇಸ್ ದಾಖಲಿಸಿರುವುದು ಮೂಡಿಬಂದಿದೆ. ಆರೋಪಿತರು ಅವರ ವಾದಕ್ಕೆ ಪೂರಕವಾಗಿ

ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲ. ಅವರ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಹೀಗಾಗಿ ಆರೋಪಿಯು ತನ್ನ ಕರ್ತವ್ಯದಲ್ಲಿ ತೀವ್ರ ದುರ್ನಡತೆ ಎಸಗಿ ಆ ಮೂಲಕ ಅಬಕಾರಿ ರಾಜಸ್ವದಲ್ಲಿ ರೂ. 1,19,30,235.62 ಗಳು ನಷ್ಟವುಂಟಾಗಲು ಕಾರಣರಾಗಿರುವುದು ಮೂಡಿ ಬಂದಿದ್ದು ಆರೋಪ ಸಾಬೀತಾಗಿ

ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರು, ಇವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 01–08–2007ರ ಎರಡನೇ ಕಾರಣ ಕೇಳುವ ಸೂಚನಾ ಪತ್ರ ಹೊರಡಿಸಿ, ವಿಚಾರಣಾ ವರದಿಯ ಬಗ್ಗೆ ಅವರು ಹೇಳುವುದು ಏನಾದರೂ ಇದ್ದಲ್ಲಿ ಲಿಖಿತವಾಗಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರು ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ : 5–10–2007ರಂದು ಲಿಖಿತ ಹೇಳಿಕೆ ಸಲ್ಲಿಸಿ ತಾವು ಸದರಿ ಸಿಎಲ್–1 ಸನ್ನದಿನ ತಪಾಸಣೆ ಕೈಗೊಂಡು ದಾಖಲೆ ಹಾಗೂ ಭೌತಿಕ ದಾಸ್ತಾನನ್ನು ಪರಿಶೀಲಿಸಿರುತ್ತೇನೆ. ಬಾಟಲಿಗಳ ಮೇಲೆ ಅಳವಡಿಸಿರುವ ಅಬಕಾರಿ ಸೆಕ್ಯೂರಿಟಿ ಲೇಬಲ್‌ಗಳನ್ನು ಮತ್ತು ಕಾರ್ಟೂನ್ ಬಾಕ್ಸ್‌ಗಳ ಮೇಲೆ ನಮೂದಿಸಿರುವ ಲೇಬಲ್ ನಂಬರುಗಳನ್ನು ಪರಿಶೀಲಿಸಿರುತ್ತೇನೆ. ಸನ್ನದಿನ ಲೆಕ್ಕದ ಪುಸ್ತಕದಲ್ಲಿ ಸಹಿ ಮತ್ತು ಮೊಹರು ನಮೂದಿಸಿರುತ್ತೇನೆ. ಸದರಿ ಸಗಟು ಸನ್ನದುದಾರರಿಂದ ಯಾವುದೇ ಅಕ್ರಮಗಳು ನಡೆದಿರುವುದು ಮತ್ತು ಬೋಗಸ್ ಇನ್‌ವಾಯ್ಸ್‌ಗಳು ಸೃಷ್ಟಿಯಾಗಿರುವುದು ಕಂಡುಬಂದಿರುವುದಿಲ್ಲ. ಆದರೆ, ವಿಚಾರಣಾಧಿಕಾರಿಯವರು ಆಪಾದಿತರು ಯಾವುದೇ ದಾಖಲೆಗಳ ಆಧಾರದ ಮೇಲೆ ಅಥವಾ ಯಾವುದೇ ಸಾಕ್ಷಿದಾರರನ್ನಾಗಲಿ ಹಾಜರುಪಡಿಸಿ ತನ್ನ ನಿಲುವನ್ನು ಸಮರ್ಥಿಸಿಕೊಂಡಿರುವುದಿಲ್ಲ ಆದುದರಿಂದ, ಅವರ ನಿಲುವನ್ನು ಯಾವ ಕಾರಣಕ್ಕೂ ಒಪ್ಪಲು ಸಾಧ್ಯವಿಲ್ಲವೆಂದು ದಾಖಲಿಸಿದ್ದಾರೆ. ನಾನು ತಪಾಸಣೆ ನಡೆಸಿಲ್ಲವೆಂಬುದನ್ನು ಸಾಬೀತುಪಡಿಸಲು ಮುಖ್ಯವಾಗಿ ಸನ್ನಿದಿನ ಲೆಕ್ಕ ಪುಸ್ತಕಗಳನ್ನು ಹಾಜರುಪಡಿಸಿ ಅವುಗಳಲ್ಲಿ ನನ್ನ ಷರಾ ಸಹಿ ಇರುವುದಿಲ್ಲವೆಂಬುದನ್ನು ಸಾಬೀತುಪಡಿಸಬೇಕಾಗಿತ್ತು. ಆದರೆ ಹಾಗೆ ಸನ್ನದಿನ ಲೆಕ್ಕಪತ್ರಗಳನ್ನು ವಿಚಾರಣೆಯಲ್ಲಿ ಹಾಜರುಪಡಿಸಿ ಪರಿಶೀಲಿಸಿಲ್ಲ ಆರೋಪವನ್ನು ಸಾಬೀತುಪಡಿಸಲು ಇಲಾಖಾ ಸಾಕ್ಷಿಯಿಂದ ಮುಖ್ಯವಾಗಿ ಬೇಕಾಗಿದ್ದ ಸಾಕ್ಷ್ಯವು ನಾನು ತ್ರೈಮಾಸಿಕ ಲೆಕ್ಕಪತ್ರಗಳ ತಪಾಸಣೆ ನಡೆಸಿಲ್ಲ ಎಂಬುದು ಬೋಗಸ್ ಇನ್‌ವಾಯ್ಸ್ ಸೃಷ್ಟಿಸಿರುವುದು ಅಥವಾ ಆರ್ಥಿಕ ನಷ್ಟವುಂಟು ಮಾಡಿರುವುದು ಎಂಬುದು ಮುಖ್ಯ ಆರೋಪದ ನಂತರ ಉದ್ಭವಿಸುವ ಆರೋಪಣೆಗಳಾಗಿರುತ್ತವೆ. ನಾನು ತ್ರೈಮಾಸಿಕ ತಪಾಸಣೆಯನ್ನು ನಡೆಸಿಲ್ಲ ಎಂಬುದನ್ನು ಸಾಕ್ಷ್ಯವು ಸಾಬೀತುಪಡಿಸಿರುವುದಿಲ್ಲ ಆದುದರಿಂದ, ಬೋಗಸ್ ಇನ್‌ವಾಯ್ಸ್ ಸೃಷ್ಟಿಸಿರುವುದು ಮತ್ತು ಆರ್ಥಿಕ ನಷ್ಟವುಂಟಾಗಿರುವುದು ಉದ್ಭವಿಸುವುದಿಲ್ಲ. ವಿಚಾರಣೆಯಲ್ಲಿ ಹಾಜರುಪಡಿಸಿರುವ ಪಿ–7 ರಿಂದ ಪಿ5ರ ಎಕ್ಸಿಬಿಟ್‌ಗಳು ಯಾವುದೇ ಇನ್‌ವಾಯ್ಸ್ ನಕಲಿ ಅಥವಾ ಮೋಸದಿಂದ ಕೂಡಿದ್ದು ಎಂಬುದನ್ನು ತೋರಿಸಿಲ್ಲ. ಆದುದರಿಂದ ನಕಲಿ–ಇನ್‌ವಾಯ್ಸ್‌ಗಳ ಅನುಪಸ್ಥಿತಿಯಲ್ಲಿ ಆರ್ಥಿಕ ನಷ್ಟವುಂಟು ಮಾಡಿರುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸಲು ಕೋರಿದ್ದಾರೆ.

ಪ್ರಕರಣವನ್ನು ಆರೋಪಿತರ ಉತ್ತರದಿಂದಾಗಿ ಮತ್ತೆ ಪರಿಶೀಲಿಸಿದೆ. ವಿಚಾರಣೆಯಲ್ಲಿ ಹಾಜರುಪಡಿಸಲಾದ ಮೌಖಿಕ ಸಾಕ್ಷ್ಯ ಮತ್ತು ದಸ್ತಾವೇಜುಗಳನ್ನು ಪರಿಶೀಲಿಸಲಾಗಿ, ಶ್ರೀ ಪಿ.ಎಸ್. ರಾಮರೆಡ್ಡಿ, ಸಿಎಲ್–1 ಸನ್ನದುದಾರರು, ಚಿಕ್ಕಬಳ್ಳಾಪುರ ಸನ್ನದು ಮಳಿಗೆಯನ್ನು ಅಬಕಾರಿ ಅಧೀಕ್ಷಕರು, ಕೋಲಾರ ಜಿಲ್ಲೆ ಇವರು ದಿನಾಂಕ : 19–6–2003 ರಂದು ತಪಾಸಣೆ ನಡೆಸಲು ಹೋದಾಗ ಸನ್ನದುದಾರರಾಗಲಿ, ಅವರಿಗೆ ಸಂಬಂಧಿಸಿದ ಯಾವುದೇ ವ್ಯಕ್ತಿಯು ತನಿಖೆಗೆ ಮುಂದಾಗಲಿಲ್ಲ. ಲೆಕ್ಕಪತ್ರಗಳನ್ನು ಹಾಜರುಪಡಿಸಲಿಲ್ಲ. ಆದ್ದರಿಂದ ಮಹಜರ್ ನಡೆಸಿ ಸನ್ನದು ಮಳಿಗೆಯನ್ನು ವಶಕ್ಕೆ ತೆಗೆದುಕೊಂಡು ಸನ್ನದುದಾರರು ಮತ್ತು ಸನ್ನದುದಾರರ ನೌಕರರ ವಿರುದ್ಧ ಮೊಕದ್ದಮೆ ದಾಖಲಿಸಿ ನ್ಯಾಯಾಲಯಕ್ಕೆ ಪ್ರಥಮ ಮಾಹಿತಿ ವರದಿ ಸಲ್ಲಿಸಲಾಗಿದೆ ಎಂದು ಸಾಕ್ಷಿ ತಿಳಿಸಿದ್ದಾರೆ. ನಂತರವೂ ಸನ್ನದುದಾರರು ತಪಾಸಣೆಗೆ ಲೆಕ್ಕದ ಪುಸ್ತಕಗಳನ್ನು ಒದಗಿಸದೇ ಇದ್ದುದರಿಂದ ಮತ್ತು ತಲೆತಪ್ಪಿಸಿಕೊಂಡಿದ್ದರಿಂದ, ವಲಯ ಕಛೇರಿಗಳ ದಾಖಲೆಗಳು ಮತ್ತು ಸದರಿ ಸನ್ನದಿನಲ್ಲಿ ದೊರೆತ ಭೌತಿಕ ದಾಸ್ತಾನು ಇತ್ಯಾದಿಗಳನ್ನು ಪರಿಶೀಲಿಸಿ ಸನ್ನದುದಾರರು ಅಧಿಕೃತವಾಗಿ ಡಿಸ್ಟಿಲರಿಗಳಿಂದ ಪಡೆದ ಮದ್ಯಕ್ಕಿಂತ ಹೆಚ್ಚಿನ ಪ್ರಮಾಣದ ಮದ್ಯವನ್ನು ಬೋಗಸ್ ಇನ್‌ವಾಯ್ಸ್‌ಗಳನ್ನು ಸೃಷ್ಟಿಸಿ ಚಿಲ್ಲರೆ ಮದ್ಯ ಮಾರಾಟಗಾರರಿಗೆ ಮಾರಾಟ ಮಾಡಿ ಸರ್ಕಾಕ್ಕೆ ರೂ. 1,19,30,235.62ಗಳಷ್ಟು ಆರ್ಥಿಕ ವಂಚನೆ ಎಸಗಿರುವುದು ಕಂಡುಬಂದಿದೆ. ಆದ್ದರಿಂದ, ಆರೋಪಿತರು ವಾದಿಸುವಂತೆ ಸನ್ನದುದಾರರ ಲೆಕ್ಕದ ಪುಸ್ತಕ, ದಾಸ್ತಾನು ಪುಸ್ತಕಗಳನ್ನು ವಿಚಾರಣೆ ಸಮಯದಲ್ಲಿ ಹಾಜರುಪಡಿಸುವ ಪ್ರಶ್ನೆಯೇ ಇಲ್ಲ. ಸದರಿ ಸನ್ನದು ಸ್ಥಳವನ್ನು ಕಾಲಕಾಲಕ್ಕೆ ತಪಾಸಣೆ ನಡೆಸಿ ಭೌತಿಕ ದಾಸ್ತಾನು ಮತ್ತು ಲೆಕ್ಕಪತ್ರಗಳನ್ನು ಪೂರ್ಣವಾಗಿ ಪರಿಶೀಲಿಸಿ ಈ ರೀತಿಯ ಅಕ್ರಮಗಳನ್ನು ತಡೆಗಟ್ಟಲು ಆಪಾದಿತರು ವಿಫಲರಾಗಿರುವುದು ಸಾಬೀತಾಗಿರುತ್ತದೆ. ಆಪಾದಿತರು ಸನ್ನದಿನ ತಪಾಸಣೆ ನಡೆಸಿಲ್ಲ ಎಂಬುದನ್ನು ಸಾಬೀತುಪಡಿಸಲು ಸನ್ನದಿನ ಲೆಕ್ಕಪತ್ರದ ಪುಸ್ತಕವನ್ನು ವಿಚಾರಣೆಯಲ್ಲಿ ಹಾಜರುಪಡಿಸಿ ಸಾಬೀತುಪಡಿಸಬೇಕಾಗಿತ್ತು. ಹಾಗೆ ಮಾಡದೇ ಇರುವುದರಿಂದ, ಆರೋಪವನ್ನು ಸಾಬೀತುಪಡಿಸಿಲ್ಲ ಮತ್ತು ಬೋಗಸ್ ಇನ್‌ವಾಯ್ಸ್ ಸೃಷ್ಟಿಸಿರುವುದಾಗಿ ಹಾಗೂ ಆರ್ಥಿಕ ನಷ್ಟವುಂಟು ಮಾಡಿರುವುದಾಗಿ ಮಾಡಿರುವ ಆರೋಪಗಳು ಉದ್ಭವಿಸುವುದಿಲ್ಲವೆಂದು ಆಪಾದಿತರು ಪ್ರತಿಪಾದಿಸಿರುವುದು ಒಪ್ಪಲರ್ಹವಾದ ಹೇಳಿಕೆಯಾಗಿರುವುದಿಲ್ಲ. ಸನ್ನದುದಾರರು ಸನ್ನದಿನ ಲೆಕ್ಕಪತ್ರಗಳನ್ನು ಹಾಜರುಪಡಿಸಲು ವಿಫಲರಾಗಿ ತಲೆಮರೆಸಿಕೊಂಡಿದ್ದಾರೆಂದು ಹಾಗೂ ಅವರು ವಿರುದ್ಧ ಮೊಕದ್ದಮೆ ದಾಖಲಿಸಿ ಸನ್ನದಿನಲ್ಲಿದ್ದ ಮದ್ಯದ ದಾಸ್ತಾನನ್ನು ವಶಪಡಿಸಿಕೊಂಡಿರುವುದು ವಿಚಾರಣೆಯಲ್ಲಿ ಹಾಜರುಪಡಿಸಿರುವ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಹಾಗಿರುವಾಗ ಆಪಾದಿತರು ಸನ್ನದಿನ ತಪಾಸಣೆ ನಡೆಸಿ ಲೆಕ್ಕದ ಪುಸ್ತಕಗಳನ್ನು ಪರಿಶೀಲಿಸಿರುವುದಾಗಿ ಹಾಗೂ ಸನ್ನದುದಾರರು ಅಕ್ರಮ ಎಸಗಿರುವುದು ಕಂಡುಬಂದಿರುವುದಿಲ್ಲವೆಂದು ಹೇಳುವುದು ತಿರುಳಿಲ್ಲದ ಆಧಾರರಹಿತವಾದ ಹೇಳಿಕೆಯಾಗಿದೆ. ಹಾಗಿದ್ದಲ್ಲಿ, ಕಛೇರಿಯ ದಾಸ್ತಾನಿಗೆ ಹೋಲಿಸಿದಲ್ಲಿ ಸನ್ನದುದಾರರ ವಹಿವಾಟಿನ ಪ್ರಮಾಣ ಏರಿಕೆ ಆಗಲು ಸಾಧ್ಯವಾಗುತ್ತಿರಲಿಲ್ಲ. ಆಪಾದಿತರು ಸನ್ನದುದಾರರ ಅಕ್ರಮಗಳನ್ನು ತಡೆಗಟ್ಟಲು ವಿಫಲರಾಗಿರುವುದರಿಂದ ಸನ್ನದುದಾರರು ಸರ್ಕಾರಕ್ಕೆ ವಂಚನೆ ಎಸಗಿ ಆರ್ಥಿಕ ನಷ್ಟವುಂಟು ಮಾಡಿರುವುದು ಸಾಬೀತಾಗಿರುವುದು ಮುಖ್ಯವಾಗುತ್ತದೆ. ಇದರಿಂದ ಆಪಾದಿತರ ಕರ್ತವ್ಯಲೋಪ ಸ್ಪಷ್ಟವಾಗಿ ಸಾಬೀತಾಗಿರುತ್ತದೆ.

ಆದ್ದರಿಂದ ಆರೋಪಿತರ ವಾದವನ್ನು ಒಪ್ಪಿಕೊಳ್ಳದೇ ಆರೋಪ ಸಾಬೀತಾಗಿದೆ. ತೀವ್ರ ದುರ್ನಡತೆ ಹಾಗೂ ಸರ್ಕಾರಕ್ಕೆ ರೂ. 1,19,30,235 ರಾಜಸ್ವ ನಷ್ಟ ಉಂಟಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 167 ಇಪಿಎಸ್ 2008, ಬೆಂಗಳೂರು, ದಿನಾಂಕ : 14–11–2014.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರ ಮಾಸಿಕ ವಿಶ್ರಾಂತಿ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಈರಣ್ಣ, ನಿವೃತ್ತ ಅಬಕಾರಿ ನಿರೀಕ್ಷಕರ ತೀವ್ರ ದುರ್ನಡತೆಯಿಂದ ಸರ್ಕಾರಕ್ಕೆ 1,19,30,235/– ಗಳ ನಷ್ಟ ಉಂಟಾದ ಕಾರಣ ಇವರು ನಿವೃತ್ತಿ ಉಪದಾನವನ್ನು ಹಾಗೂ ಅದೇ ನಿಯಮಾವಳಿಯ ನಿಯಮ 118–ಎ(4)ರನ್ವಯ ಅವರ ಗಳಿಕೆ ರಜೆ ನಗಧೀಕರಣ ಸೌಲಭ್ಯಗಳನ್ನು ನಷ್ಟಕ್ಕೆ ಸರಿದೂಗಿಸಿಕೊಳ್ಳಬೇಕೆಂದು ಆದೇಶಿಸುತ್ತದೆ.

ಮೇಲಿನಂತೆ ಸರಿದೂಗಿಸಿಕೊಂಡ ನಂತರವೂ ಬಾಕಿ ಉಳಿಯುವ ಮೊತ್ತವನ್ನು ನಿವೃತ್ತರ ವಿರುದ್ಧ ನ್ಯಾಯಾಲಯದಲ್ಲಿ ಸಿವಿಲ್ ಮೊಕದ್ದಮೆ ಹೂಡುವ ಮೂಲಕ ವಸೂಲು ಮಾಡಬೇಕೆಂದು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR. 850**

**ವೆಂಕಟೇಶ್. ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 27 ಎಸ್‌ಜೆವೈ 2014 ಬೆಂಗಳೂರು, ದಿನಾಂಕ: 26–09–2014.**

ವಿಷಯ : ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011 (ಎಸ್‌ಇಸಿಸಿ–2011) ಅಂತಿಮ ಗಣತಿ ಪಟ್ಟಿ ಪ್ರಕಟಣೆ ಬಗ್ಗೆ.

ಉಲ್ಲೇಖ : 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ 32 ಎಸ್‌ಜೆವೈ 2011 (ಎ–8), ದಿನಾಂಕ: 22–01–2014.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ 32 ಎಸ್‌ಜೆವೈ 2011(ಎ–8) ದಿನಾಂಕ: 19–02–2014.

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಸಂಬಂಧ ಉಲ್ಲೇಖ(1)ರಲ್ಲಿ ನಮೂದಿಸಿರುವ ಅಧಿಸೂಚನೆಯಂತೆ **ಚಿಕ್ಕಮಗಳೂರು** ಜಿಲ್ಲೆಗೆ ಕರಡು ಮತ್ತು ಅಂತಿಮ ಗಣತಿ ಪಟ್ಟಿ ಪ್ರಕಟಿಸಲು ವೇಳಾಪಟ್ಟಿ ನೀಡಲಾಗಿತ್ತು. ಆದರೆ ಸದರಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಪ್ರಕ್ರಿಯೆಯು ಪೂರ್ಣಗೊಂಡಿಲ್ಲದ ಕಾರಣ ಅಂತಿಮ ಗಣತಿ ಪಟ್ಟಿ ಪ್ರಕಟಣೆಯ ದಿನಾಂಕವನ್ನು ಉಲ್ಲೇಖ (2)ರಂತೆ ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾಗಿತ್ತು.

ಪ್ರಸ್ತುತ ಈ ಪ್ರಕ್ರಿಯೆಯು **ಚಿಕ್ಕಮಗಳೂರು** ಜಿಲ್ಲೆಯಲ್ಲಿ ಪೂರ್ಣಗೊಂಡಿರುವುದರಿಂದ ದಿನಾಂಕ: 29–09–2014 ರಂದು ಅಂತಿಮ ಗಣತಿ ಪಟ್ಟಿಯನ್ನು ಪ್ರಕಟಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶ್ರೀಕೃಷ್ಣ ಎನ್. ಬುಗಟ್ಯಾಗೋಳ**
ನಿರ್ದೇಶಕರು(ಇ–ಆಡಳಿತ)ಮತ್ತು ಸ್ವಉಕಾ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ರಾಜ್ಯದ ಎಸ್‌ಇಸಿಸಿ–2011 ನೋಡಲ್ ಅಧಿಕಾರಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT & PANCHAYAT RAJ SECRETARIAT

### NOTIFICATION

**No. RDP 27 SJY 2014 Bangalore, dated: 26-09-2014**.

**Sub** : Socio, Economic & Caste Census 2011 (SECC-2011) Publication of Final List - Reg.

**Ref** : 1. Notification No. RDP 32 SJY 2011, (A-8) dated 22-01-2014.
2. Notification No. RDP 32 SJY 2011 (A-8), dated: 19-02-2014.

Government of Karnataka, Rural Development and Panchayat Raj Department had issued notification indicating the time line for publishing Draft and Final lists of Socio, Economic & Caste Census 2011 pertaining to **Chikkamagalur** district as per ref(1)..

As per Ref (2) this process of publication of Final list was postponed as the process was not completed.

Presently, SECC-2011 process has been completed in **Chikkamagalur** district. Hence sanction is accorded to publish the Final list of **Chikkamgalur** district on 29-09-2014.

By Order and in the name of the Governor of Karnataka

**P.R- 46**

**S.C-10**

**Shreekrishna N. Bugatyagol**
Director (E-governance)&(SEP)&E/O
Dy Secretary to Government
State SECC – 2011 Nodal Officer,
Rural Development & Panchayat Raj Department.

## RURAL DEVELOPMENT & PANCHAYAT RAJ SECRETARIAT

### NOTIFICATION

**No. RDP 27 SJY 2014 Bangalore, dated: 19-09-2014**

**Sub** : Socio, Economic & Caste Census 2011 (SECC-2011) Publication of Final List - Reg.

**Ref** :
1. Notification No. RDP 32 SJY 2011, dated 07-12-2013, 12-12-2013, 28-12-2013 & 30-12-2013 and 30-01-2014
2. Notification No. RDP 32 SJY 2011 dated: 19-02-2014.

Government of Karnataka, Rural Development and Panchayat Raj Department had issued notifications indicating the time line for publishing Draft and Final lists of Socio, Economic & Caste Census 2011 in the following districts as per Ref(1).

1. Bagalkot
2. Bellary
3. Bijapur
4. Chitradurga
5. Dakshina Kannada
6. Shimoga
7. Uttara Kannada

As per Ref (2) this process of publication of Final list was postponed because the process was not completed.

Presently, SECC-2011 process has been completed in the above 7 Districts. Hence sanction is accorded to publish the Final list in the above 7 Districts on 25-09-2014.

By Order and in the name of the Governor of Karnataka

**Shreekrishna N. Bugatyagol**

Director (E-governance)&(SEP)&E/O

Dy Secretary to Government

State SECC – 2011 Nodal Officer,

Rural Development & Panchayat Raj Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 27 ಎಸ್‌ಜೆವೈ 2014 ಬೆಂಗಳೂರು, ದಿನಾಂಕ: 19–09–2014.**

ವಿಷಯ : ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011 (ಎಸ್‌ಇಸಿಸಿ–2011) ಅಂತಿಮ ಗಣತಿ ಪಟ್ಟಿ ಪ್ರಕಟಣೆ ಬಗ್ಗೆ.

ಉಲ್ಲೇಖ :
1. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 ದಿನಾಂಕ: 07-12-2013, 12-12-2013, 28-12-2013, 30-12-2013 ಮತ್ತು 30-01-2014.
2. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011(ಎ–8) ದಿನಾಂಕ: 19–02–2014.

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಸಂಬಂಧ ಉಲ್ಲೇಖ(1)ರಲ್ಲಿ ನಮೂದಿಸಿರುವ ಅಧಿಸೂಚನೆಗಳಂತೆ ಈ ಕೆಳಕಂಡ 7 ಜಿಲ್ಲೆಗಳಲ್ಲಿ ಅಂದರೆ:

1. ಬಾಗಲಕೋಟೆ
2. ಬಳ್ಳಾರಿ
3. ಬಿಜಾಪುರ
4. ಚಿತ್ರದುರ್ಗ
5. ದಕ್ಷಿಣ ಕನ್ನಡ
6. ಶಿವಮೊಗ್ಗ
7. ಉತ್ತರ ಕನ್ನಡ

ಈ ಜಿಲ್ಲೆಗಳಲ್ಲಿ ಕರಡು ಮತ್ತು ಅಂತಿಮ ಪಟ್ಟಿ ಪ್ರಕಟಿಸಲು ವೇಳಾಪಟ್ಟಿ ನೀಡಲಾಗಿತ್ತು. ಆದರೆ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಪ್ರಕ್ರಿಯೆಯು ಮೇಲ್ಕಂಡ ಜಿಲ್ಲೆಗಳ ಎಸ್‌ಇಸಿಸಿ–2011ರ ಪ್ರಕ್ರಿಯೆ ಪೂರ್ಣಗೊಂಡಿಲ್ಲದ ಕಾರಣ ಅಂತಿಮ ಪಟ್ಟಿ ಪ್ರಕಟಣೆಯ ದಿನಾಂಕವನ್ನು ಉಲ್ಲೇಖ (2)ರಂತೆ ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಗಿತ್ತು.

ಪ್ರಸ್ತುತ ಈ ಪ್ರಕ್ರಿಯೆಯು ಮೇಲ್ಕಂಡ ಜಿಲ್ಲೆಗಳಲ್ಲಿ ಪೂರ್ಣಗೊಂಡಿರುವುದರಿಂದ ದಿನಾಂಕ: 25–09–2014 ರಂದು ಅಂತಿಮ ಗಣತಿ ಪಟ್ಟಿ ಪ್ರಕಟಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶ್ರೀಕೃಷ್ಣ ಎನ್. ಬುಗಟ್ಯಾಗೋಳ**
ನಿರ್ದೇಶಕರು(ಇ–ಆಡಳಿತ)ಮತ್ತು ಸ್ವಉಕಾ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ರಾಜ್ಯದ ಎಸ್ಇಸಿಸಿ–2011 ನೋಡಲ್ ಅಧಿಕಾರಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**P.R: 47**
**S.C-10**

## RURAL DEVELOPMENT & PANCHAYAT RAJ SECRETARIAT

### NOTIFICATION

**No. RDP 27 SJY 2014 Bangalore, dated: 12-11-2014**.

**Sub** : Socio, Economic & Caste Census 2011 (SECC-2011) Publication of Final List - Reg.

**Ref** : 1. Notification No. RDP 32 SJY 2011, (A-8) dated 20-01-2014.
2. Notification No. RDP 32 SJY 2011 (A-8), dated: 19-02-2014.

Government of Karnataka, Rural Development and Panchayat Raj Department had issued notification indicating the time line for publishing Draft and Final lists of Socio, Economic & Caste Census 2011 pertaining to **Hassan** district as per ref(1).

As per Ref (2) this process of publication of Final list was postponed as the process was not completed.

Presently, SECC-2011 process has been completed in **Hassan** district. Hence sanction is accorded to publish the Final list of **Hassan** district on **17-11-2014.**

By Order and in the name of the Governor of Karnataka
**Shreekrishna N. Bugatyagol**
Director (E-governance)&(SEP)&E/O
Dy Secretary to Government
State SECC – 2011 Nodal Officer,
Rural Development & Panchayat Raj Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 27 ಎಸ್‌ಜೆವೈ 2014 ಬೆಂಗಳೂರು, ದಿನಾಂಕ: 12–11–2014.**

ವಿಷಯ : ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011 (ಎಸ್ಇಸಿಸಿ–2011) ಅಂತಿಮ ಗಣತಿ ಪಟ್ಟಿ ಪ್ರಕಟಣೆ ಬಗ್ಗೆ.

ಉಲ್ಲೇಖ : 1. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 (ಎ–8), ದಿನಾಂಕ: 20–01–2014.
2. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011(ಎ–8) ದಿನಾಂಕ: 19–02–2014.

ರಾಜ್ಯ ಸರ್ಕಾರವು ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಸಂಬಂಧ ಉಲ್ಲೇಖ(1)ರಲ್ಲಿ ನಮೂದಿಸಿರುವ ಅಧಿಸೂಚನೆಯಂತೆ **ಹಾಸನ** ಜಿಲ್ಲೆಗೆ ಕರಡು ಮತ್ತು ಅಂತಿಮ ಗಣತಿ ಪಟ್ಟಿ ಪ್ರಕಟಿಸಲು ವೇಳಾಪಟ್ಟಿ ನೀಡಲಾಗಿತ್ತು. ಆದರೆ ಸದರಿ ಜಿಲ್ಲೆಯ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಪ್ರಕ್ರಿಯೆಯು ಪೂರ್ಣಗೊಂಡಿಲ್ಲದ ಕಾರಣ ಅಂತಿಮ ಗಣತಿ ಪಟ್ಟಿ ಪ್ರಕಟಣೆಯ ದಿನಾಂಕವನ್ನು ಉಲ್ಲೇಖ (2)ರಂತೆ ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಗಿತ್ತು.

ಪ್ರಸ್ತುತ ಈ ಪ್ರಕ್ರಿಯೆಯು **ಹಾಸನ** ಜಿಲ್ಲೆಯಲ್ಲಿ ಪೂರ್ಣಗೊಂಡಿರುವುದರಿಂದ ದಿನಾಂಕ: 17–11–2014 ರಂದು ಅಂತಿಮ ಗಣತಿ ಪಟ್ಟಿಯನ್ನು ಪ್ರಕಟಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶ್ರೀಕೃಷ್ಣ ಎನ್. ಬುಗಟ್ಯಾಗೋಳ**
ನಿರ್ದೇಶಕರು(ಇ–ಆಡಳಿತ)ಮತ್ತು ಸ್ವಉಕಾ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ರಾಜ್ಯದ ಎಸ್ಇಸಿಸಿ–2011 ನೋಡಲ್ ಅಧಿಕಾರಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**P.R: 42**
**S.C-10**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 27 ಎಸ್‌ಜೆವೈ 2014 ಬೆಂಗಳೂರು, ದಿನಾಂಕ: 22–12–2014.**

ವಿಷಯ : ಸಾಮಾಜಿಕ, ಆರ್ಥಿಕ ಮತ್ತು ಜಾತಿ ಗಣತಿ–2011 (ಎಸ್‌ಇಸಿಸಿ–2011) ಅಂತಿಮ ಗಣತಿ ಪಟ್ಟಿ ಪ್ರಕಟಣೆ ಬಗ್ಗೆ.

ಓದಲಾಗಿದೆ : 1. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011 ದಿನಾಂಕ: 28–12–2013 ಮತ್ತು 07–01–2014.

2. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 32 ಎಸ್‌ಜೆವೈ 2011(ಎ–8) ದಿನಾಂಕ: 19–02–2014.

ರಾಜ್ಯ ಸರ್ಕಾರವು ಸಾಮಾಜಿಕ, ಆರ್ಥಿಕ ಮತ್ತು ಜಾತಿ ಗಣತಿ–2011ರ ಸಂಬಂಧ ಉಲ್ಲೇಖ(1)ರಲ್ಲಿ ನಮೂದಿಸಿರುವ ಅಧಿಸೂಚನೆಗಳಂತೆ ಈ ಕೆಳಕಂಡ 2 ಜಿಲ್ಲೆಗಳಲ್ಲಿ ಅಂದರೆ:

1. **ಬೀದರ್**
2. **ಉಡುಪಿ**

ಈ ಜಿಲ್ಲೆಗಳಲ್ಲಿ ಕರಡು ಮತ್ತು ಅಂತಿಮ ಪಟ್ಟಿ ಪ್ರಕಟಿಸಲು ವೇಳಾಪಟ್ಟಿ ನೀಡಲಾಗಿತ್ತು. ಆದರೆ ಸಾಮಾಜಿಕ ಆರ್ಥಿಕ ಮತ್ತು ಜಾತಿ ಗಣತಿ–2011ರ ಪ್ರಕ್ರಿಯೆಯು ಮೇಲ್ಕಂಡ ಜಿಲ್ಲೆಗಳ ಎಸ್‌ಇಸಿಸಿ–2011ರ ಪ್ರಕ್ರಿಯೆ ಪೂರ್ಣಗೊಂಡಿಲ್ಲದ ಕಾರಣ ಅಂತಿಮ ಪಟ್ಟಿ ಪ್ರಕಟಣೆಯ ದಿನಾಂಕವನ್ನು ಉಲ್ಲೇಖ (2)ರಂತೆ ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಗಿತ್ತು.

ಪ್ರಸ್ತುತ ಈ ಪ್ರಕ್ರಿಯೆಯು ಮೇಲ್ಕಂಡ ಜಿಲ್ಲೆಗಳಲ್ಲಿ ಪೂರ್ಣಗೊಂಡಿರುವುದರಿಂದ ದಿನಾಂಕ: 29–12–2014 ರಂದು ಅಂತಿಮ ಗಣತಿ ಪಟ್ಟಿ ಪ್ರಕಟಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶ್ರೀಕೃಷ್ಣ ಎನ್. ಬುಗಟ್ಯಾಗೋಳ**
ನಿರ್ದೇಶಕರು(ಇ–ಆಡಳಿತ)ಮತ್ತು ಸ್ವಉಕಾ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ರಾಜ್ಯದ ಎಸ್‌ಇಸಿಸಿ–2011 ನೋಡಲ್ ಅಧಿಕಾರಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT & PANCHAYAT RAJ SECRETARIAT

### NOTIFICATION

**No. RDP 27 SJY 2014 Bangalore, dated: 22-12-2014**

**Sub** : Socio, Economic & Caste Census 2011 (SECC-2011) Publication of Final List - Reg.

**Ref** : 1. Notification No. RDP 32 SJY 2011, dated 28-12-2013 & 07-01-2014

2. Notification No. RDP 32 SJY 2011 (A-8), dated: 19-02-2014.

Government of Karnataka, Rural Development and Panchayat Raj Department had issued notification indicating the time line for publishing Draft and Final lists of Socio, Economic & Caste Census 2011 in the following districts as per Ref(1).

1. **Bidar**
2. **Udupi**

As per Ref (2) this process of publication of Final list was postponed as the process was not completed.

Presently, SECC-2011 process has been completed in the above 2 districts. Hence sanction is accorded to publish the Final list in the above 2 Districts on 29-12-2014.

By Order and in the name of the Governor of Karnataka
**Shreekrishna N. Bugatyagol**
Director (E-governance)&(SEP)&E/O
Dy Secretary to Government
State SECC – 2011 Nodal Officer,
Rural Development & Panchayat Raj Department.

**P.R: 41**

**S.C-10**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಹೊಸದಾಗಿ 100 ಪಶುಚಿಕಿತ್ಸಾಲಯಗಳನ್ನು ತೆರೆಯುವ ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ** : ಪತ್ರ ಸಂಖ್ಯೆ: ಆಪಸಂ/ಡಿವಿಡಿ-3/ವಿವ-12/ಹೊಸಪ.ಚಿ/ಪ್ರಾ.ಪ.ಚಿ./ಮೇ.ದರ್ಜೆ/ 2013-14, ದಿನಾಂಕ: 04-07-2014

**ಪ್ರಸ್ತಾವನೆ:**

ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಇವರು ಮೇಲೆ ಓದಲಾದ ಪತ್ರದಲ್ಲಿ ರಾಜ್ಯದಲ್ಲಿ ಒಟ್ಟು 4112 ಪಶುವೈದ್ಯಕೀಯ ಸಂಸ್ಥೆಗಳು ಇದ್ದು, ಇದರಲ್ಲಿ 364 ಪಶು ಆಸ್ಪತ್ರೆಗಳು, 1943 ಪಶುಚಿಕಿತ್ಸಾಲಯಗಳು ಮತ್ತು 1181 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳು ಜಿಲ್ಲಾ ಪಂಚಾಯಿತಿ ಅಡಿ ಕಾರ್ಯ ನಿರ್ವಹಿಸುತ್ತಿರುವುದಾಗಿ ತಿಳಿಸಿ, 2014-15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಹೊಸದಾಗಿ 100 ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ರೂ.10.00 ಕೋಟಿಗಳ ಅನುದಾನವನ್ನು ಒದಗಿಸುವುದಾಗಿ ಘೋಷಣೆಯಾಗಿರುತ್ತದೆ. ಸದರಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅವಶ್ಯವಿರುವ ಹುದ್ದೆಗಳು ಮತ್ತು ಅನುದಾನದ ವಿವರಗಳು ಕೆಳಕಂಡಂತಿದೆ.

1. **ಹುದ್ದೆಗಳ ಮಂಜೂರಾತಿ:**

ಅ) ನೂತನವಾಗಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಅವಶ್ಯವಿರುವ ಹುದ್ದೆಗಳ ವಿವರ:

| ಕ್ರ.ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ ಪ್ರತಿ ಒಂದು ಸಂಸ್ಥೆಗೆ | ಒಟ್ಟು 100 ಸಂಸ್ಥೆಗೆ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಪಶುವೈದ್ಯರು | 28100-50100 | 1 ಹುದ್ದೆ | 100 |
| 2 | ಪಶುವೈದ್ಯಕೀಯ ಪರೀಕ್ಷಕರು | 11600-21000 | 1 ಹುದ್ದೆ | 100 |
| 3 | ಡಿ ದರ್ಜೆ ನೌಕರರು | 9600-14550 | 2 ಹುದ್ದೆ | 200 |
| | **ಒಟ್ಟು** | | **4 ಹುದ್ದೆಗಳು** | |

ಆ) **ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಅವಶ್ಯವಿರುವ ಹುದ್ದೆಗಳ ವಿವರ:**

| ಕ್ರ.ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ ಪ್ರತಿ ಒಂದು ಸಂಸ್ಥೆಗೆ | ಒಟ್ಟು 100 ಸಂಸ್ಥೆಗೆ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಪಶುವೈದ್ಯರು | 28100-50100 | 1 ಹುದ್ದೆ | 100 |
| 2 | ಡಿ ದರ್ಜೆ ನೌಕರರು | 9600-14550 | 1 ಹುದ್ದೆ | 100 |
| | **ಒಟ್ಟು** | | **2 ಹುದ್ದೆಗಳು** | **200** |

2. **ಪ್ರಸ್ತಾವನೆಗೆ ಬೇಕಾಗುವ ವೆಚ್ಚ / ಅನುದಾನದ ವಿವರ ಕೆಳಕಂಡಂತ್ತಿದೆ:**

ರಾಜ್ಯದಲ್ಲಿ ಹೊಸದಾಗಿ 100 ಪಶುಚಿಕಿತ್ಸಾಲಯಗಳನ್ನು ತೆರೆಯಲು ಆವರ್ತಕ ವೆಚ್ಚವಾಗಿ ರೂ. 14.00 ಕೋಟಿಗಳು ಮತ್ತು ಅನಾವರ್ತಕ ವೆಚ್ಚ ರೂ.3.00 ಕೋಟಿಗಳ ವೆಚ್ಚ ಸೇರಿ ಒಟ್ಟು ರೂ. 17.00 ಕೋಟಿಗಳ ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಆವರ್ತಕ ವೆಚ್ಚ ರೂ. 9.00 ಕೋಟಿಗಳು ಮತ್ತು ಅನಾವರ್ತಕ ವೆಚ್ಚ ರೂ. 2.00 ಕೋಟಿಗಳು ಹೀಗೆ ಒಟ್ಟು ರೂ. 11.00 ಕೋಟಿಗಳ ಅವಶ್ಯಕತೆಯಿದ್ದು, ಒಟ್ಟಾರೆ ರೂ. 28.00 ಕೋಟಿಗಳ ಅನುದಾನ ಬೇಕಾಗುತ್ತದೆ.

ಪ್ರಸ್ತಾಪಿತ ಎಲ್ಲಾ ಕೇಂದ್ರಗಳು ಜಿಲ್ಲಾ ವಲಯ – ತಾಲ್ಲೂಕು ಪಂಚಾಯತ್ ಅಡಿ ಕಾರ್ಯಕ್ರಮ ನಿರ್ವಹಿಸುತ್ತಿದ್ದು, ಜಿಲ್ಲಾ ವಲಯದ ತಾಲ್ಲೂಕು ಪಂಚಾಯತ್ ಕಾರ್ಯಕ್ರಮದಡಿ ಯೋಜನಾ ಲೆಕ್ಕ ಶೀರ್ಷಿಕೆ "ವಿಭಾಗ ಪಂಚಾಯತ್‌ಗಳು / ಮಧ್ಯಂತರ ಮಟ್ಟದ ಪಂಚಾಯತ್‌ಗಳಿಗೆ ನೆರವು, ತಾಲ್ಲೂಕು ಪಂಚಾಯತ್‌ಗಳ 2403-00-197-1-01 ಬ್ಯಾಕ್ ಗ್ರಾಂಟ್ಸ್ ಅಡಿ ಲಿಂಕ್ ಕೋಡ್ 2403-00-101-0-61 'ಗ್ರಾಮೀಣ ಪಶುವೈದ್ಯ ಶಾಲೆಗಳನ್ನು ತೆರೆಯುವುದು ಮತ್ತು ಅವುಗಳನ್ನು ತಾಲ್ಲೂಕು ಮಟ್ಟದ ಔಷಧಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವುದು' ಅಡಿ ಆಯವ್ಯಯದಲ್ಲಿ ಘೋಷಿಸಿರುವ ಅನುದಾನ ರೂ. 10.00 ಕೋಟಿಯೊಂದಿಗೆ ಹೆಚ್ಚುವರಿಯಾಗಿ ರೂ. 18.00 ಕೋಟಿ ಹೀಗೆ ಒಟ್ಟು ರೂ. 28.00 ಕೋಟಿ ಅನುದಾನ ಒದಗಿಸಿ, ಬಿಡುಗಡೆ ಮಾಡಲು ಹಾಗೂ ಅವಶ್ಯವಿರುವ ಒಟ್ಟು 600 ಹುದ್ದೆಗಳನ್ನು ಸೃಜಿಸಿ ಆಡಳಿತಾತ್ಮಕ ಮಂಜೂರಾತಿ ನೀಡಲು ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2014-15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಿ, ಈ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ

ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಒಟ್ಟು 600 ಹುದ್ದೆಗಳನ್ನು ಸೃಜಿಸಲು ಹಾಗೂ ಭರ್ತಿ ಮಾಡಲು ಹಾಗೂ ಇದರಲ್ಲಿ ಹೊಸ ಪಶುಚಿಕಿತ್ಸಾಲಯಗಳ 200 ಹಾಗೂ ಮೇಲ್ದರ್ಜೆಗೇರಿಸಿದ ಪಶುಚಿಕಿತ್ಸಾಲಯಗಳ 100 'ಡಿ' ದರ್ಜೆ ನೌಕರರ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೂಲಕ ತೆಗೆದುಕೊಳ್ಳಲು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು ದಿನಾಂಕ: 24-12-2014**

ಮೇಲ್ಕಂಡ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದೆ.

ಈ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶು ಚಿಕಿತ್ಸಾಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಈ ಕೆಳಕಂಡಂತೆ ಒಟ್ಟು 600 ಹುದ್ದೆಗಳನ್ನು ಸೃಜಿಸಲು ಹಾಗೂ ಭರ್ತಿ ಮಾಡಲು ಮಂಜೂರಾತಿ ನೀಡಲಾಗಿದೆ. ಇದರಲ್ಲಿ ಹೊಸ ಪಶುಚಿಕಿತ್ಸಾಲಯಗಳ 200 ಹಾಗೂ ಮೇಲ್ದರ್ಜೆಗೇರಿಸಿದ ಪಶುಚಿಕಿತ್ಸಾಲಯಗಳ 100 'ಡಿ' ದರ್ಜೆ ನೌಕರರ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೂಲಕ ತೆಗೆದುಕೊಳ್ಳತಕ್ಕದ್ದು.

| ಕ್ರ.ಸಂ | ಹುದ್ದೆಗಳ ವಿವರ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ ಪ್ರತಿ ಒಂದು ಸಂಸ್ಥೆಗೆ | ಒಟ್ಟು 100 ಸಂಸ್ಥೆಗಳ ಹುದ್ದೆಗಳ ಸಂಖ್ಯೆ |
|---|---|---|---|---|
| **ಹೊಸ ಪಶುಚಿಕಿತ್ಸಾಲಯಗಳಿಗೆ** | | | | |
| 1. | ಪಶುವೈದ್ಯರು | 28100-50100 | 01 | 100 |
| 2. | ಪಶುವೈದ್ಯಕೀಯ ಪರೀಕ್ಷಕರು | 11600-21000 | 01 | 100 |
| 3. | ಡಿ-ದರ್ಜೆ ನೌಕರರು | 9600-14550 | 02 | 200 |
| **ಮೇಲ್ದರ್ಜೆಗೇರಿಸಿದ ಪಶುಚಿಕಿತ್ಸಾಲಯಗಳಿಗೆ** | | | | |
| 1. | ಪಶುವೈದ್ಯರು | 28100-50100 | 01 | 100 |
| 2. | ಡಿ-ದರ್ಜೆ ನೌಕರರು | 9600-14550 | 01 | 100 |
| **ಒಟ್ಟು** | | | | **600** |

ಈ ಮೇಲಿನಂತೆ ಸೃಜಿಸಲಾದ ಹುದ್ದೆಗಳಿಗೆ ಪ್ರಸ್ತುತ 2014-15 ನೇ ಸಾಲಿನ ಮೂರು ತಿಂಗಳ ಅವಧಿಗೆ ಅಗತ್ಯವಿರುವ ವೇತನ ಬಾಬ್ತಿಗಾಗಿ ಹಾಗೂ ಈ ಸಾಲಿನಲ್ಲಿ ಸಾಧನ ಸಾಮಗ್ರಿಗಳ ಸಂಗ್ರಹಣೆಗೆ ಅಗತ್ಯವಿರುವ ಒಟ್ಟು 1101.00 ಲಕ್ಷಗಳ ಅನುದಾನವನ್ನು ಜಿಲ್ಲಾ ವಲಯ ಯೋಜನಾ ಲೆಕ್ಕ ಶೀರ್ಷಿಕೆ 2403-00-197-1-01 ಲಿಂಕ್ ಹೆಡ್ ಲೆಕ್ಕಶೀರ್ಷಿಕೆ 2403-00-101-0-61 ಇದರಡಿ ಈ ಕೆಳಕಂಡಂತೆ 2014-15ನೇ ಸಾಲಿನ ಪೂರಕ ಅಂದಾಜು (2ನೇ ಕಂತು)ರಲ್ಲಿ ಒದಗಿಸಲಾಗುವುದು. (ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಚಿಕಿತ್ಸಾಲಯ | ವೇತನ ಬಾಬ್ತಿಗೆ | ಸಾಧನ ಸಾಮಗ್ರಿ ಸಂಗ್ರಹಣೆ ಬಾಬ್ತಿಗೆ |
|---|---|---|---|
| 1. | 100 ಹೊಸ ಪಶುಚಿಕಿತ್ಸಾಲಯಕ್ಕೆ | 341.00 | 335.00 |
| 2. | 100 ಮೇಲ್ದರ್ಜೆಗೇರಿಸಿದ ಪಶುಚಿಕಿತ್ಸಾಲಯಕ್ಕೆ | 225.00 | 200.00 |
| | **ಒಟ್ಟು** | **566.00** | **535.00** |

ಸದರಿ ಹೊಸದಾಗಿ ತೆರೆಯುತ್ತಿರುವ 100 ಪಶುಚಿಕಿತ್ಸಾಲಯಗಳ ಸ್ಥಳಗಳನ್ನು ಹಾಗೂ ಈಗಾಗಲೇ ಅಸ್ತಿತ್ವದಲ್ಲಿರುವ 100 ಪಶುಚಿಕಿತ್ಸಾ ಕೇಂದ್ರಗಳನ್ನು ಗುರುತಿಸಿ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 336 ವೆಚ್ಚ-4/2014, ದಿನಾಂಕ: 06-11-2014 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**P.R- 31**

**S.C-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಪ್ರಸನ್ನ**

ಪೀಠಾಧಿಕಾರಿ-2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ-ಎ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** **ಬನ್ನೇರುಘಟ್ಟ ರಸ್ತೆಯಿಂದ ಅಂಜನಾಪುರ ಬಡಾವಣೆಗೆ 80 ಅಡಿ ಮುಖ್ಯರಸ್ತೆಯನ್ನು ಸಂಪರ್ಕ ರಸ್ತೆಯನ್ನಾಗಿ ನಿರ್ಮಿಸುವ ಯೋಜನೆಗೆ ಮಂಜೂರಾತಿ ನೀಡಿ ಆಡಳಿತಾತ್ಮಕ ಆದೇಶ ಹೊರಡಿಸುವ ಬಗ್ಗೆ.**

**ಓದಲಾಗಿದೆ :**
1. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಹೊರಡಿಸಿರುವ ಪ್ರಾಥಮಿಕ ಅಧಿಸೂಚನೆ ಸಂಖ್ಯೆ BDA/Commr/DC(LA)/SALAO/C4 /PR/1214/2010-11 ದಿನಾಂಕ 23.02.2011
2. ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ/ ಆಯು/ ಉಆ/ (ಭೂಸ್ವಾ)/ ವಿಅಭೂಸ್ವಾಅ/ಸಿ4/ಪಿಆರ್/928/2011-12 ದಿನಾಂಕ: 03.01.2012, 27.04.2012 ಮತ್ತು 31.07.2012

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 23.02.2011ರ ಪ್ರಾಥಮಿಕ ಅಧಿಸೂಚನೆಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬನ್ನೇರುಘಟ್ಟ ರಸ್ತೆಯಿಂದ ಅಂಜನಾಪುರ ಬಡಾವಣೆಗೆ 80 ಅಡಿ ಮುಖ್ಯರಸ್ತೆಯನ್ನು ಸಂಪರ್ಕ ರಸ್ತೆಯನ್ನಾಗಿ ನಿರ್ಮಿಸಲು ಅವಶ್ಯವಾದ ಜಮೀನುಗಳ ಭೂಸ್ವಾಧೀನಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976ರ ಕಲಂ 17(1) ಹಾಗೂ (3) ರನ್ವಯ ಪ್ರಾಥಮಿಕ ಅಧಿಸೂಚನೆ ಹೊರಡಿಸಿ, ಸದರಿ ಅಧಿಸೂಚನೆಯನ್ನು ದಿನಾಂಕ 05.05.2011ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 03.01.2012, 27.04.2012 ಮತ್ತು 31.07.2012ರ ಪತ್ರಗಳಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು ಬನ್ನೇರುಘಟ್ಟ ರಸ್ತೆಯಿಂದ ಅಂಜನಾಪುರ ಬಡಾವಣೆಗೆ 80 ಅಡಿ ಮುಖ್ಯರಸ್ತೆಯನ್ನು ಸಂಪರ್ಕ ರಸ್ತೆಯನ್ನಾಗಿ ನಿರ್ಮಿಸುವ ಯೋಜನೆಗೆ ಮೇಲೆ (1)ರಲ್ಲಿ ಓದಲಾದ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆಯೆಂದು ಸದರಿ ಪ್ರಾಥಮಿಕ ಅಧಿಸೂಚನೆಯಲ್ಲಿ ಈ ಯೋಜನೆಗೆ ಅವಶ್ಯವಾದ ಗೊಟ್ಟಿಗೆರೆ ಗ್ರಾಮದ ಸರ್ವೆ ನಂ. 98/3ರಲ್ಲಿನ 0–09 ಗುಂಟೆ, 98/7ರಲ್ಲಿನ 0–07 ಗುಂಟೆ, 99ರಲ್ಲಿನ 0–09 ಗುಂಟೆ, 117/1ರಲ್ಲಿನ 0–11 ಗುಂಟೆ, 118/4ರಲ್ಲಿನ 0–01 ಗುಂಟೆ, 118/5ರಲ್ಲಿನ 0–10 ಗುಂಟೆ, 120/1ರಲ್ಲಿನ 0–13 ಗುಂಟೆ, 120/2ರಲ್ಲಿನ 0–03 ಗುಂಟೆ ಮತ್ತು 120/3 ರಲ್ಲಿನ 0–18 ಗುಂಟೆ, ಹೀಗೆ ಒಟ್ಟು 02 ಎಕರೆ 01 ಗುಂಟೆ ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲು ದಿನಾಂಕ 24.10.2011ರಂದು ನಡೆದ ಪ್ರಾಧಿಕಾರದ ವಿಷಯ ಸಂಖ್ಯೆ: 332/2011ರಲ್ಲಿ ತೀರ್ಮಾನಿಸಲಾಗಿದೆಯೆಂದು ತಿಳಿಸಿ, ಸದರಿ ರಸ್ತೆಯ ನಿರ್ಮಾಣಕ್ಕಾಗಿ ಅವಶ್ಯಕವಾಗಿರುವ ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976 ಕಲಂ 19(1)ರನ್ವಯ ಅಂತಿಮ ಅಧಿಸೂಚನೆ ಹೊರಡಿಸಲು ಹಾಗೂ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976 ಕಲಂ 18(3)ರನ್ವಯ ಸರ್ಕಾರದ ಮಂಜೂರಾತಿ ನೀಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ. ಹಾಗೂ ಈ ಯೋಜನೆಯ ಭೂಸ್ವಾಧೀನಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭರಿಸುವುದಾಗಿ ತಿಳಿಸಿರುತ್ತಾರೆ.

ಆಯುಕ್ತರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 69 ಬೆಂಆಸೇ 2012, ಬೆಂಗಳೂರು, ದಿನಾಂಕ: 10.01.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬನ್ನೇರುಘಟ್ಟ ರಸ್ತೆಯಿಂದ ಅಂಜನಾಪುರ ಬಡಾವಣೆಗೆ 80 ಅಡಿ ಮುಖ್ಯರಸ್ತೆಯನ್ನು ಸಂಪರ್ಕ ರಸ್ತೆಯನ್ನಾಗಿ ನಿರ್ಮಿಸಲು ಈ ಕೆಳಕಂಡ ಅಂಶಗಳಿಗೆ ಸರ್ಕಾರದ ಮಂಜೂರಾತಿ ನೀಡಿದೆ.

ಅ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ ಕಲಂ 18(3) ರನ್ವಯ ಅಂದಾಜು ರೂ. 529 ಲಕ್ಷಗಳ (ಐದು ಕೋಟಿ ಇಪ್ಪತ್ತೊಂಬತ್ತು ಲಕ್ಷಗಳು ಮಾತ್ರ) ವೆಚ್ಚದ ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದೆ ;

ಆ) ಸಂಪರ್ಕ ರಸ್ತೆಗೆ ಬೇಕಾಗಿರುವ ಗೊಟ್ಟಿಗೆರೆ ಗ್ರಾಮದ ಸರ್ವೆ ನಂ. 98/3ರಲ್ಲಿನ 0–09 ಗುಂಟೆ, 98/7ರಲ್ಲಿನ 0–07 ಗುಂಟೆ, 99ರಲ್ಲಿನ 0–09 ಗುಂಟೆ, 117/1ರಲ್ಲಿನ 0–11 ಗುಂಟೆ, 118/4ರಲ್ಲಿನ 0–01 ಗುಂಟೆ, 118/5ರಲ್ಲಿನ 0–10 ಗುಂಟೆ, 120/1ರಲ್ಲಿನ 0–13 ಗುಂಟೆ, 120/2ರಲ್ಲಿನ 0–03 ಗುಂಟೆ ಮತ್ತು 120/3ರಲ್ಲಿನ 0–18 ಗುಂಟೆ ಹೀಗೆ ಒಟ್ಟು 2 ಎಕರೆ 01 ಗುಂಟೆ ವಿಸ್ತೀರ್ಣದ ಜಮೀನನ್ನು ಬೆಂಗಳೂರು ಅಭಿವೃದ್ಧಿ ಕಾಯ್ದೆ ಕಲಂ 19(1) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 69 ಬೆಂಆಸೇ 2012, ದಿನಾಂಕ:10.01.2013ರಂದು ಅಂತಿಮ ಅಧಿಸೂಚನೆ ಹೊರಡಿಸಿದೆ ;

ಇ) ಈ ಯೋಜನೆಗೆ ಬೇಕಾದ ಹಣಕಾಸನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ತನ್ನ ಸ್ವಂತ ಸಂಪನ್ಮೂಲಗಳಿಂದ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**PR. 128**
**SC. 700**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹೊರವರ್ತುಲ ರಸ್ತೆ ಸರಪಳಿ : 60.850 ಕಿ.ಮೀನಲ್ಲಿ ಮಾಗಡಿ ರಸ್ತೆ ಜಂಕ್ಷನ್ ಮತ್ತು ತುಮಕೂರು ರಸ್ತೆ ಜಂಕ್ಷನ್ ನಡುವೆ ಶ್ರೀ ಕಂಠೀರವ ಸ್ಟುಡಿಯೋ ಬಳಿ ಗ್ರೇಡ್ ಸೆಪರೇಟರ್ ನಿರ್ಮಾಣ ಮಾಡುವ ಕಾಮಗಾರಿಗೆ ಅಗತ್ಯವಿರುವ ಜಮೀನು/ ಸ್ವತ್ತು ನಿವೇಶನಗಳನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಮತ್ತು ಅಂತಿಮ ಅಧಿಸೂಚನೆ ಹೊರಡಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಹೊರಡಿಸಿರುವ ಪ್ರಾಥಮಿಕ ಅಧಿಸೂಚನೆ ಸಂಖ್ಯೆ: BDA/ Commr/DC (LA) SLAO/A2/ PR/ 31/2013-14, ದಿನಾಂಕ: 26–7–2013.
2) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ/ ವಿಭೂಸ್ವಾಅ/ ಎ2/ ಪಿಆರ್/33/2013–14, ದಿನಾಂಕ: 17–01–2014, 23–05–2014, 05–07–2014 ಮತ್ತು 08.01.2015

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 26–7–2013ರ ಪ್ರಾಥಮಿಕ ಅಧಿಸೂಚನೆಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಹೊರವರ್ತುಲ ರಸ್ತೆ ಸರಪಳಿ : 60.850 ಕಿ.ಮೀನಲ್ಲಿ ಮಾಗಡಿ ರಸ್ತೆ ಜಂಕ್ಷನ್ ಮತ್ತು ತುಮಕೂರು ರಸ್ತೆ ಜಂಕ್ಷನ್ ನಡುವೆ ಶ್ರೀ ಕಂಠೀರವ ಸ್ಟುಡಿಯೋ ಬಳಿ ಗ್ರೇಡ್ ಸೆಪರೇಟರ್ ನಿರ್ಮಾಣ ಮಾಡುವ ಕಾಮಗಾರಿಗೆ ಅಗತ್ಯವಿರುವ ಜಮೀನು/ ಸ್ವತ್ತು ನಿವೇಶನಗಳ ಭೂಸ್ವಾಧೀನಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976ರ ಕಲಂ 17(1) ಹಾಗೂ (3) ರನ್ವಯ ಪ್ರಾಥಮಿಕ ಅಧಿಸೂಚನೆ ಹೊರಡಿಸಿ, ಸದರಿ ಅಧಿಸೂಚನೆಯನ್ನು ದಿನಾಂಕ: 29–8–2013 ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 17–01–2014, 23–05–2014 ಮತ್ತು 5–7–2014ರ ಪತ್ರಗಳಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಈಗಾಗಲೇ ನಿರ್ಮಿಸಿರುವ ಹೊರವರ್ತುಲ ರಸ್ತೆಯನ್ನು ಸಿಗ್ನಲ್ ಮುಕ್ತ ಕಾರಿಡಾರ್ ರಸ್ತೆಯನ್ನಾಗಿಸುವ ನಿಟ್ಟಿನಲ್ಲಿ ಸಾಕಷ್ಟು ಜಂಕ್ಷನ್‌ಗಳನ್ನು ಸಿಗ್ನಲ್ ಮುಕ್ತಗೊಳಿಸಲಾಗಿದೆ. ಸದರಿ ಯೋಜನೆಯ ಮುಂದುವರೆದ ಭಾಗವಾದ ಹೊರವರ್ತುಲ ರಸ್ತೆ ಸರಪಳಿ : 60.850 ಕಿ.ಮೀನಲ್ಲಿ ಮಾಗಡಿ ರಸ್ತೆ ಜಂಕ್ಷನ್ ಮತ್ತು ತುಮಕೂರು ರಸ್ತೆ ಜಂಕ್ಷನ್ ನಡುವೆ ಶ್ರೀ ಕಂಠೀರವ ಸ್ಟುಡಿಯೋ ಬಳಿ ಗ್ರೇಡ್ ಸೆಪರೇಟರ್ ನಿರ್ಮಾಣ ಮಾಡುವ ಕಾಮಗಾರಿಗೆ ಅಗತ್ಯವಿರುವ ಜಮೀನು/ ಸ್ವತ್ತು ನಿವೇಶನಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಪ್ರಾಥಮಿಕ ಅಧಿಸೂಚನೆಯನ್ನು 10172.42 ಚದರ ಮೀಟರ್ ವಿಸ್ತೀರ್ಣಕ್ಕೆ ಹೊರಡಿಸಿದ್ದು, ಬಿಡಿಎ ಕಾಯ್ದೆ 17(5) ರಡಿಯಲ್ಲಿ ಸಂಬಂಧ ಪಟ್ಟ ಸ್ವತ್ತುಗಳ / ಜಮೀನು/ ನಿವೇಶನಗಳ ಮಾಲೀಕರು/ ಹಿತಾಸಕ್ತರಿಗೆ ನಿಯಮಾನುಸಾರ ತಿಳುವಳಿಕೆಗಾಗಿ ನೋಟೀಸ್‌ಗಳನ್ನು ನೀಡಿ, ಅವರುಗಳಿಂದ ಬಂದಂತಹ ಆಕ್ಷೇಪಣೆಗಳನ್ನು ಸ್ವೀಕರಿಸಿ, ಭೂಸ್ವಾಧೀನ ಕಾಯ್ದೆ ಕಲಂ 5 (ಎ)ರನ್ವಯ ಆಕ್ಷೇಪಣಾದಾರರಿಗೆ ವಿಚಾರಣಾ ನೋಟೀಸ್ ನೀಡಿ ವಿಚಾರಣಾ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗಿರುತ್ತದೆಯೆಂದು, ಪ್ರಾಧಿಕಾರದ ವಿಷಯ ಸಂ: 577/08, ದಿನಾಂಕ: 27–9–2008ರ ಪ್ರಾಧಿಕಾರದ ಸಭೆಯಲ್ಲಿ ಹೊರವರ್ತುಲ ರಸ್ತೆಯನ್ನು ಅಬೈಡ್ ಶಿಫಾರಸ್ಸಿನಂತೆ ಸಿಗ್ನಲ್ ಮುಕ್ತ ರಸ್ತೆಯನ್ನಾಗಿ ಅಭಿವೃದ್ಧಿಗೊಳಿಸಲು ತೀರ್ಮಾನ ಕೈಗೊಳ್ಳಲಾಗಿದೆ ಹಾಗೂ ದಿನಾಂಕ: 17–6–2009ರಂದು ಮಾನ್ಯ ಮುಖ್ಯಮಂತ್ರಿಯವರು ಮತ್ತು ಅಬೈಡ್ ಅಧ್ಯಕ್ಷರೊಂದಿಗೆ ನಡೆದ ಸಭೆಯ ನಡವಳಿಯಂತೆ ಸದರಿ ಕಾಮಗಾರಿಯನ್ನು ಶೀಘ್ರವಾಗಿ ಪೂರ್ಣಗೊಳಿಸಬೇಕಾದುದರಿಂದ, ಈ ಯೋಜನೆಗೆ ಬಿಡಿಎ ಕಾಯ್ದೆ ಕಲಂ 1976ರ ಕಲಂ 15ರನ್ವಯ ಪ್ರತ್ಯೇಕವಾಗಿ ಸರ್ಕಾರದ ಅನುಮತಿ ಪಡೆಯಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಸದರಿ ಯೋಜನೆಯ ಸಂಬಂಧ ತಾಂತ್ರಿಕ ಶಾಖೆಯಿಂದ ಯೋಜನೆಗೆ ಅವಶ್ಯವಿಲ್ಲದ ಪ್ರಾಥಮಿಕ ಅಧಿಸೂಚನೆಯಲ್ಲಿ ಸೇರಿರುವ ಕ್ರಮ ಸಂ: 1 ರಿಂದ 12 ಹಾಗೂ ಕ್ರಮಸಂಖ್ಯೆ 98ರಿಂದ 100 ರವರೆಗಿನ ಒಟ್ಟು 15ಸ್ವತ್ತುಗಳ 280.10ಚ.ಮೀ ವಿಸ್ತೀರ್ಣವು ಉದ್ದೇಶಿತ ಯೋಜನೆಗೆ ಅವಶ್ಯವಿರುವುದಿಲ್ಲ ಮತ್ತು ಭೂಸ್ವಾಧೀನ ಪ್ರಕ್ರಿಯೆಯ ಅಂತಿಮ ಅಧಿಸೂಚನೆಯಲ್ಲಿ ಕೈಬಿಡಬಹುದಾಗಿದೆಯೆಂದು ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಈ ಬಗ್ಗೆ ಪ್ರಾಧಿಕಾರದ ಸಭೆಯಲ್ಲಿ ಅನುಮೋದನೆ ದೊರೆತಿರುತ್ತದೆಯೆಂದು ತಿಳಿಸಿರುತ್ತಾರೆ.

ಬಿ.ಡಿ.ಎ ಕಾಯ್ದೆ 1976 ರ ಕಲಂ 18 (1) (ಎ) ರಡಿಯಲ್ಲಿ ಈ ಶಿಫಾರಸ್ಸನ್ನು ಪರಿಗಣಿಸಿ, ಇವುಗಳನ್ನು ಬಿಡಿಎ ಭೂಸ್ವಾಧೀನ ಕಾಯ್ದೆ ಕಲಂ 19(1) ಮತ್ತು (3) ರನ್ವಯ ಸದರಿ ಯೋಜನೆಗೆ ಉದ್ದೇಶಿತ ಅಂತಿಮ ಅಧಿಸೂಚನೆಯನ್ನು ಹೊರಡಿಸುವಾಗ 280.10ಚ.ಮೀ ವಿಸ್ತೀರ್ಣದ ಸ್ವತ್ತುಗಳನ್ನು ಭೂಸ್ವಾಧೀನದ ಪ್ರಕ್ರಿಯೆಗೆ ಒಳಪಡಿಸದೇ ಅಂತಿಮ ಅಧಿಸೂಚನೆಯಿಂದ ಹೊರತು ಪಡಿಸಬೇಕಾಗಿರುತ್ತದೆಯೆಂದು, ಉಳಿದಂತೆ, 9892.32 ಚ.ಮೀ. ವಿಸ್ತೀರ್ಣವು ಅಂತಿಮ ಅಧಿಸೂಚನೆಗೆ ಪರಿಗಣಿಸಬೇಕಿರುವ ಜಮೀನು/ ಸ್ವತ್ತುಗಳಿಗೆ ಬಿಡಿಎ ಕಾಯ್ದೆ ಕಲಂ 19(1) ಮತ್ತು (3)ರಡಿಯಲ್ಲಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ದಿನಾಂಕ: 23–12–2013ರ ಪ್ರಾಧಿಕಾರದ ಸಭೆಗೆ ವಿಷಯ ಸಂ: 223/13ರಲ್ಲಿ ಮಂಡಿಸಲಾಗಿದ್ದು, ಸಭೆಯು ಚರ್ಚಿಸಿ, ಕೆಲವೊಂದು ನಿರ್ಣಯಗಳನ್ನು ಕೈಗೊಂಡಿರುತ್ತದೆಯೆಂದು ವರದಿ ಮಾಡಿರುತ್ತಾರೆ. ಸದರಿ ಯೋಜನೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ನಿಧಿಯಿಂದ ಕೈಗೊಂಡಿದ್ದು, ಈ ಕಾಮಗಾರಿಗೆ 2014–15ನೇ ಸಾಲಿನ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಬಜೆಟ್‌ನಲ್ಲಿ ರೂ. 1000.00 ಲಕ್ಷ ಮೊತ್ತವನ್ನು ಕಾಯ್ದಿರಿಸಲಾಗಿದೆಯೆಂದು, ಹೆಚ್ಚಿನ ಅವಶ್ಯಕತೆ ಕಂಡುಬಂದಲ್ಲಿ, ಹೆಚ್ಚುವರಿ ಮೊತ್ತವನ್ನು ಮರು ಹೊಂದಾಣಿಕೆ ಸಮಯದಲ್ಲಿ ಹೊಂದಿಸಲಾಗುವುದೆಂದು, ಈ ಯೋಜನೆಗೆ ಸಂಬಂಧಿಸಿದಂತೆ 27–1–2014ರ ಪ್ರಾಧಿಕಾರದ ಸಭೆಯ ವಿಷಯ ಸಂ: 13/14ರಲ್ಲಿ ಕೈಗೊಂಡಿರುವ ನಿರ್ಣಯದಂತೆ, ಸದರಿ ಯೋಜನೆಗೆ ಅವಶ್ಯವಿರುವ ಒಟ್ಟು 16,325.65ಚ.ಮೀ ಜಮೀನಿನ ಪೈಕಿ ಈಗಾಗಲೇ ಕೇಂದ್ರ ಸರ್ಕಾರದ ಪೋರ್ಮನ್ ತರಬೇತಿ ಸಂಸ್ಥೆ ಒಡೆತನದ 6153.23ಚ.ಮೀ. ಪ್ರದೇಶವನ್ನು ಪ್ರಾಧಿಕಾರಕ್ಕೆ ಹಸ್ತಾಂತರಿಸಿಕೊಳ್ಳಲಾಗಿದ್ದು, ಉಳಿಕೆ ಪ್ರದೇಶವನ್ನು 2014ರ ಫೆಬ್ರವರಿ ಅಂತ್ಯದೊಳಗೆ ಭೂಸ್ವಾಧೀನ ಪಡಿಸಿಕೊಳ್ಳುವ ಸಾಧ್ಯತೆ ಅನುಸರಿಸಿ ಕಾಮಗಾರಿಯನ್ನು ಪೂರ್ಣಗೊಳಿಸುವ ಕಾಲಾವಧಿಯನ್ನು ದಿನಾಂಕ: 31–12–2014ರವರೆಗೆ ವಿಸ್ತರಿಸಲಾಗಿದೆಯೆಂದು, ಹಾಲಿ ಈ ಜಂಕ್ಷನ್ ಭಾಗದಲ್ಲಿ ವಾಹನ ಸಂಚಾರ ದಟ್ಟಣೆ ತೀವ್ರವಾಗಿದ್ದು, ಸಂಚಾರ ನಿಯಂತ್ರಣ ಸಮಸ್ಯೆಯಿಂದಾಗಿ ನಾಗರೀಕರಿಗೆ ತೊಂದರೆ ಉಂಟಾಗುತ್ತಿದ್ದು, ಈ ಯೋಜನೆಗೆ ಹೊಂದಿಕೊಂಡ ಜಮೀನಿನ ಭೂಸ್ವಾಧೀನ ಮಾಡಿದ ಜಾಗವನ್ನು ಬಿಟ್ಟು ಉಳಿಕೆ ಭಾಗದಲ್ಲಿ ಕಾಮಗಾರಿಯು ಪ್ರಗತಿಯಲ್ಲಿರುವುದಾಗಿ, ಈ ಕಾರಣಗಳಿಂದಾಗಿ, ಯೋಜನೆಯನ್ನು ನಿಗಧಿತ ಕಾಲಾವಧಿಯಲ್ಲಿ ಪೂರ್ಣಗೊಳಿಸಬೇಕಾದ ಅನಿವಾರ್ಯತೆಯಿದ್ದು, ಅಂತಿಮ ಅಧಿಸೂಚನೆಯನ್ನು ತುರ್ತಾಗಿ ಹೊರಡಿಸಬೇಕೆಂದು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಇತ್ತೀಚೆಗೆ ದಿನಾಂಕ: 1–1–2014ರಿಂದ ಜಾರಿಗೆ ಬರುವಂತೆ, ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ, ಕೇಂದ್ರ ಸರ್ಕಾರದ 'ಭೂ ಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ ನಿರ್ಮಾಣ ಮತ್ತು ಪುನರ್‌ವಸತಿ ಕಾಯ್ದೆ–2013' ಜಾರಿಗೆ ಬಂದಿದ್ದು, ರಾಜ್ಯ ಸರ್ಕಾರದಿಂದ ಕಾಯ್ದೆಯನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆಯೆಂದು ಮತ್ತು ಅಂತಿಮವಾಗಿ ರಾಜ್ಯ ಸರ್ಕಾರದಿಂದ ಅನುಮೋದನೆಗೊಳ್ಳುವ ಪರಿಷ್ಕೃತ ಕಾಯ್ದೆಯಂತೆ ಸದರಿ ಯೋಜನೆಗೆ ಸಂಬಂಧಿಸಿದಂತೆ, ಅವಾರ್ಡ್ ಹಂತದ ನಡವಳಿಕೆಗಳನ್ನು ಕೈಗೊಳ್ಳಲಾಗುವುದೆಂದು ತಿಳಿಸಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 40 ಬೆಂಆಸೇ 2014, ಬೆಂಗಳೂರು, ದಿನಾಂಕ: 20–01–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹೊರವರ್ತುಲ ರಸ್ತೆ ಸರಪಳಿ : 60.850 ಕಿ.ಮೀನಲ್ಲಿ ಮಾಗಡಿ ರಸ್ತೆ ಜಂಕ್ಷನ್ ಮತ್ತು ತುಮಕೂರು ರಸ್ತೆ ಜಂಕ್ಷನ್ ನಡುವೆ ಶ್ರೀ ಕಂಠೀರವ ಸ್ಟುಡಿಯೋ ಬಳಿ ಗ್ರೇಡ್ ಸೆಪರೇಟರ್ ನಿರ್ಮಾಣ ಮಾಡುವ ಕಾಮಗಾರಿಗೆ ಸಂಬಂಧಿಸಿದಂತೆ, ಈ ಯೋಜನೆಗೆ ಅತ್ಯವಶ್ಯವಿರುವ 9892.32ಚ.ಮೀ. ವಿಸ್ತೀರ್ಣದ ಜಮೀನು/ ಸ್ವತ್ತು ನಿವೇಶನಗಳನ್ನು ಭೂಸ್ವಾಧೀನ ಪಡಿಸಿಕೊಳ್ಳುವ ಯೋಜನೆಗೆ ಪ್ರಾಧಿಕಾರವು ಪ್ರಸ್ತಾಪಿಸಿರುವ ಷರತ್ತುಗಳೊಂದಿಗೆ ಬೆಂಗಳೂರು ಅಭಿವೃದ್ಧಿ ಕಾಯ್ದೆ 1976ರ ಕಲಂ 18(3) ರನ್ವಯ ಆಡಳಿತಾತ್ಮಕ ಅನುಮೋದನೆ ನೀಡಿದೆ ಹಾಗೂ ಬಿಡಿಎ ಕಾಯ್ದೆ ಕಲಂ 19(1) ರನ್ವಯ ಅಂತಿಮ ಅಧಿಸೂಚನೆ ಹೊರಡಿಸಲು ಸಹಾ ಅನುಮೋದಿಸಿದೆ.

ಹಾಗೂ ಸದರಿ ಯೋಜನೆಗೆ ತಗಲುವ ಅಂದಾಜು ರೂ. 8815.00 ಲಕ್ಷ ( ರೂಪಾಯಿ ಎಂಟು ಸಾವಿರದ ಎಂಟುನೂರ ಹದಿನೈದು ಲಕ್ಷಗಳು ಮಾತ್ರ)ಗಳ ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

**PR. 69**
**SC. 200**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59